ओ३म्

ಋಗ್ವೇದ | ಸಾಮವೇದ

# ವೇದ ಪ್ರಕಾಶ

ಯಜುರ್ವೇದ | ಅಥರ್ವವೇದ



ಸಂಪುಟ ೮ | ದುಂದುಭಿ ಸಂವತ್ಸರ ಭಾದ್ರಪದ-ಸೆಪ್ಟಂಬರ್ ೧೯೮೨ | ಸಂಚಿಕೆ ೬

ಸತ್ಯದರ್ಶಕರಿಗೆ-ತತ್ವನಿಷ್ಠರಿಗೆ-ವಿಚಾರವಾದಿಗಳಿಗೆ
ಮೆಚ್ಚಿಗೆಯ ಮಾಸಪತ್ರಿಕೆ

ವಿಷಯ ಸೂಚಿ — ಪುಟ ಸಂಖ್ಯೆ



ನಾಲ್ಕೂ ವೇದಗಳ ಕುರಿತು, ಅಖಿಲಕರ್ಣಾಟಕದಲ್ಲಿ ಪ್ರಕಟವಾಗುವ
ಏಕೈಕ ಮಾಸಪತ್ರಿಕೆ "ವೇದಪ್ರಕಾಶ"

**ಪ್ರಧಾನ ಸಂಪಾದಕರು**
ಶ್ರೀ ಪಂ॥ ಸುಧಾಕರ ಚತುರ್ವೇದೀ
ಜಯನಗರ, ಬೆಂಗಳೂರು

**ಉಪಸಂಪಾದಕರು**
ಶ್ರೀ ಪಂ॥ ಮಂಜುನಾಥ ಶಾಸ್ತ್ರಿ, ಎಂ. ಎ.

**ಸಹಾಯಕ ಸಂಪಾದಕರು**
ಶ್ರೀ ಕೆ. ಎ. ಶೇಷಾಚಲಪತಿ, ಬಿ. ಎ.

**ಪ್ರಕಾಶಕರು**
ಶ್ರೀ ಪ॥ ಸಂಜೀವ ಕಾಮತ್,
ವೈದಿಕ ಸಾಹಿತ್ಯ ಪ್ರಕಾಶನ ಸಮಿತಿ
ಕುಂಜಿಬೆಟ್ಟು, ಉಡುಪಿ-೫೭೬ ೧೦೨

**ಸಂಪಾದಕ ಮಂಡಲಿ**
ಡಾ॥ ಪ. ನಾರಾಯಣರಾವ್ M. A., Ph.D
ಶ್ರೀ ಕು. ಶಿ. ಹರಿದಾಸ ಭಟ್, ಎಂ. ಎ.
ಶ್ರೀ ವೇದವ್ರತ, B.Sc., M.A., B.Ed.
ಶ್ರೀ ಜ್ಞೇಯವರ್ಮನ್, ಎಂ. ಎ. ಮುಂಬಯಿ
ಶ್ರೀ ಸುಕುಮಾರಶಾಸ್ತ್ರಿ, ಎಂ. ಎ., (ಸಂ.-ಹಿಂ.)
ಶ್ರೀ ಗುಂಡ್ಮಿ ಚಂದ್ರಶೇಖರ ಐತಾಳ, ಎಂ. ಎ.

**ಮುದ್ರಕರು:**
ಶ್ರೀ ಗಣೇಶ್ ಪ್ರಿಂಟರ್ಸ್, ಅಳಕೆ, ಮಂಗಳೂರು
ವಾರ್ಷಿಕ ಚಂದಾ: ಅಂಚೆ ಸೇರಿ ರೂ ೧೫-೦೦
ಆಜೀವ ಸದಸ್ಯರಿಗೆ ರೂ ೧೫೦-೦೦

# ಸವಿನಯ ನಿವೇದನೆ

ಕಳೆದ ವಿಶೇಷಾಂಕದ ಪುಟ ೯೦ ರಲ್ಲಿ ಪ್ರಕಟಿಸಿದಂತೆ 'ವೇದಪ್ರಕಾಶ'ಕ್ಕೆ ಒದಗಿದ ಆರ್ಥಿಕ ನಷ್ಟ ರೂ. 1,27,975/– ಅಲ್ಲದೆ ಕಳೆದ ೯ ತಿಂಗಳಿನಿಂದಲೂ ಪ್ರಚಾರದ ಕೆಲಸ ಸ್ಥಗಿತವಾಗಿ ಆದ ಧಾರ್ಮಿಕ ನಷ್ಟ ಅಪಾರ. ವೇದಾಭಿಮಾನಿಗಳಾದ ಸಾರ್ವಜನಿಕ ಬಂಧುಭಗಿನಿಯರು ಈ ಆರ್ಥಿಕ ಸಂಕಷ್ಟವನ್ನು ಪರಹರಿಸಲು ಪರಮಾತ್ಮನು ತಮಗೆ ಅನುಗ್ರಹಿಸಿದ ಸಂಪತ್ತಿನಲ್ಲಿ ಸ್ವಲ್ಪ ಭಾಗವನ್ನು ಏಕಗಂಟಿನಿಂದಾಗಲೀ ತಿಂಗಳು ತಿಂಗಳು ಗಳಲ್ಲಾಗಲೀ ಈ ವೇದಪ್ರಚಾರದ ಧಾರ್ಮಿಕ ಯಜ್ಞ ಮುಂದೆ ಸರಿಯಾಗಿ ನಡೆಯುವಂತೆ, ಹೃತ್ಪೂರ್ವಕವಾಗಿ ನೆರವಾಗುವಿರೆಂದು ಆಶಿಸುತ್ತೇವೆ. ಆ ದಯಾಮಯನಾದ ಪ್ರಭು ತಮಗೆಲ್ಲರಿಗೂ ಸತ್ಪ್ರೇರಣೆ ನೀಡುತ್ತಾ, ಸಕಲ ಸೌಭಾಗ್ಯಗಳನ್ನಿತ್ತು ಆಶೀರ್ವದಿಸಲೆಂದು ಪ್ರಾರ್ಥಿಸುತ್ತೇವೆ.

—ವೈದಿಕ ಸಾಹಿತ್ಯ ಪ್ರಕಾಶನ ಸಮಿತಿ

## ಚಂದಾದಾರರಲ್ಲಿ ಮನವಿ

೧. ಅಂಚೆ ವಿಳಂಬದಿಂದಾಗಲಿ ಅಥವಾ ಮತ್ತಾವುದೇ ಕಾರಣದಿಂದ ತಮಗೆ ಪತ್ರಿಕೆ ತಲುಪದಿದ್ದಲ್ಲಿ ಆ ತಿಂಗಳ ಅಂತ್ಯದವರೆಗೆ ಕಾದು ನೋಡಿ, ದಯಮಾಡಿ ನಮಗೆ ತಿಳಿಸಿರಿ. ಪತ್ರವ್ಯವಹಾರ ಮಾಡು ವಾಗ ಚಂದಾಸಂಖ್ಯೆಯನ್ನು ತಿಳಿಸಿರಿ.

೨. ಬಹಳಷ್ಟು ವಾರ್ಷಿಕ ಸದಸ್ಯರು ಹಾಗೂ ಆಜೀವ ಸದಸ್ಯರು ತಮ್ಮ ಚಂದಾವನ್ನು ಬಾಕಿ ಉಳಿಸಿಕೊಂಡಿದ್ದಾರೆ. ಅವರಿಗೆ ಪತ್ರಿಕೆಯ ಮುಖೇನ ಹಾಗೂ ಪತ್ರದ ಮೂಲಕವೂ ಅನೇಕ ಬಾರಿ ವಿನಂತಿಸಿದ್ದೇವೆ. ಅಂಥವರು ತಮ್ಮ ಬಾಕಿ ಹಣವನ್ನು ಕೂಡಲೇ ಕಳುಹಿಸಿ ನಮ್ಮ ಕಾರ್ಯದಲ್ಲಿ ಸಹಕರಿಸಿರಿ.

೩. ವಾರ್ಷಿಕ ಸದಸ್ಯರಾದವರು ಆಜೀವ ಸದಸ್ಯರಾಗಿ ಪ್ರೋತ್ಸಾಹಿಸಿರಿ. ಹಾಗೂ ತಮ್ಮ ಬಂಧುಮಿತ್ರರುಗಳನ್ನೂ ಸದಸ್ಯರನ್ನಾಗಿ ಮಾಡಿ ಸಹಕಾರ ನೀಡಿರಿ.

೪. ಪ್ರತಿಯೋರ್ವ ಸದಸ್ಯರೂ ಸಾಧ್ಯವಾದಷ್ಟು ಸದಸ್ಯರನ್ನು ಕೂಡಿಸಿ ಕೊಡಿರಿ. ಪ್ರತಿಯೋರ್ವರೂ ಕನಿಷ್ಠ ಮತ್ತೊಬ್ಬರನ್ನಾದರೂ ಸದಸ್ಯರ ಬಳಗಕ್ಕೆ ಸೇರಿಸಲು ಸಂಕಲ್ಪಿಸಿರಿ.

ಈ ರೀತಿ ವೇದ ಪ್ರಚಾರದ ಪವಿತ್ರ ಯಜ್ಞದಲ್ಲಿ ತಮ್ಮ ಪಾಲಿನ ಆಹುತಿಯನ್ನು ಸಮರ್ಪಿಸಿರಿ.



# ವೇದಪ್ರಕಾಶ



ಸಂಪುಟ ೮ | ದುಂದುಭಿ ಸಂವತ್ಸರ ಭಾದ್ರಪದ-ಸೆಪ್ಟಂಬರ -೧೯೮೨ | ಸಂಚಿಕೆ ೬

## ವೈದಿಕ ಪ್ರಾರ್ಥನೆ

**ಓಂ ಸೋಮ ಗೀರ್ಭಿಷ್ಟ್ವಾ ವಯಂ ವರ್ದ್ಧಯಾಮೋ ವಚೋವಿದಃ ।**
**ಸುಮೃಳೀಕೋ ನ ಆ ವಿಶ ॥** [ಋಗ್ವೇದ:- ೧-೯೧-೧೧]

"ಹೇ ಸೋಮ! [ವಚೋವಿದಃ] ವೇದಶಾಸ್ತ್ರಾದಿ ವಚನಗಳನ್ನು ಪೂರ್ಣ ಅರಿತ ಬೃಹಸ್ಪತಿಯೇ! [ವಯಮ್] ನಾವು [ಗೀರ್ಭಿಃ] ಅನೇಕ ಸ್ತುತಿ ಸಮೂಹಗಳಿಂದ [ತ್ವಾ] ನಿನ್ನನ್ನು [ವರ್ದ್ಧಯಾಮಃ] ವರ್ಧಿಸುತ್ತೇವೆ; ಸರ್ವೋಪರಿ ವಿರಾಜಮಾನನಾಗಿರುವವನೆಂದು ತಿಳಿಯುತ್ತೇವೆ. [ಸುಮೃಳೀಕಃ] ಉತ್ತಮ ಸುಖ ಸಂತೋಷಗಳನ್ನು ಕೊಡುವವನಾದ ನೀನು [ನಃ] ನಮಗೆ [ಆ ವಿಶ] ಪ್ರಾಪ್ತನಾಗು".

"ಹೇ ಪರಮಪ್ರಶಾಂತನಾದ, ಶಾಂತಿಯನ್ನು ಜೀವಮಾತ್ರರಿಗೆ ಕರುಣಿಸುವ ದೇವ ದೇವ! ವೇದವೇದ್ಯನಾದ ಪರಮಾತ್ಮನೇ! ಮಾನವ ಮಾತ್ರರ ಕಲ್ಯಾಣಕ್ಕಾಗಿ ಸೃಷ್ಟಿಯ ಆದಿಯಲ್ಲಿ ನೀನು ಕರುಣಿಸಿದ ಪರಮಪಾವನ, ವೇದಮಂತ್ರಗಳ ಮಂಜುಳ ಗಾನಗೈಯ್ಯುತ್ತ ನಿನ್ನತ್ತ ದತ್ತಚಿತ್ತರಾಗಿ ಸಾಗುತ್ತೇವೆ. ಸೃಷ್ಟಿಕರ್ತನೂ, ಪಾಲನಕರ್ತನೂ, ಲಯಕರ್ತನೂ ಆದ ನಿನ್ನ ಮಂಗಳ ಸ್ವರೂಪವನ್ನು ಪ್ರತಿನಿತ್ಯ ಪ್ರಾತಃ ಸಾಯಂಕಾಲಗಳ ಸಂಧ್ಯಾವಂದನೆ, ಅಗ್ನಿಹೋತ್ರಗಳ ಮೂಲಕ, ಹೊಂದಲು ಪ್ರಯತ್ನಿಸುತ್ತೇವೆ. ಪ್ರತಿದಿನವೂ ನಮ್ಮನ್ನು ನಿನ್ನ ಬಳಿಗೆ ಕರೆದೊಯ್ಯಬಲ್ಲ ನಿನ್ನ ಪಾವನ ಸಾನ್ನಿಧ್ಯವನ್ನು ನಮಗೊದಗಿಸಬಲ್ಲ ಪವಿತ್ರ ವೇದಮಂತ್ರಗಳ ಮೂಲಕ ನಿನ್ನನ್ನು ಸ್ತುತಿಸುತ್ತೇವೆ; ನಿನ್ನ ಧ್ಯಾನದಲ್ಲಿ ನಿಮಗ್ನರಾಗಿ ಅನಂತವಾದ ಆನಂದ ಸಾಗರದಲ್ಲಿ ವಿಹರಿಸುತ್ತೇವೆ. ಹಾಗೂ ಈ 'ಆನಂದಸಾಗರ ವಿಹಾರ'ವು ನಿರಂತರವಾಗಿರಲಿ—ಎಂಬುದಾಗಿ ಹೃತ್ಪೂರ್ವಕ ಆಶಿಸುತ್ತೇವೆ.

ಹೇ ಪರಮ ಕರುಣಾಮೃತವಾರಿಧೇ! ನಾವು ಎಷ್ಟು ಜ್ಞಾನಿಗಳಾದರೂ, ಎಷ್ಟು ದೊಡ್ಡ ಸಾಧಕರೆನಿಸಿದರೂ ಅಲ್ಪಜ್ಞರಾದ ಮಾನವರಷ್ಟೆ! ಮಾನವ ಸಹಜ ದೌರ್ಬಲ್ಯಗಳು ನಿರಂತರವಾಗಿ ನಮ್ಮ ಶರೀರ, ಮನಸ್ಸು, ಬುದ್ಧಿ ಹಾಗೂ ಆತ್ಮಗಳನ್ನು ಕಾಡುತ್ತಿರುತ್ತವೆ. ಅನೇಕ ಬಾರಿ ಶರೀರಸುಖಕ್ಕಾಗಿ, ಮನಸ್ಸು ಹೇಳಿದಂತೆ ಕೇಳುತ್ತೇವೆ. ಪರಿಣಾಮವಾಗಿ ಪತನದತ್ತ ಸಾಗುವಂತಾಗುತ್ತದೆ. ಮನೋದೌರ್ಬಲ್ಯದಿಂದಾಗಿ ಬುದ್ಧಿ ಎಚ್ಚರತಪ್ಪುತ್ತದೆ. ಆಗ ಮಹಾಮಹಿಮನಾದ ನಿನ್ನ ಸ್ಥಾನದಲ್ಲಿ ಕಲ್ಲು, ಮಣ್ಣು, ಲೋಹ, ಆಕಿಂಚನರಾದ ಮಾನವರನ್ನು ತಂದು ನಿಲ್ಲಿಸಿ, ಅವುಗಳನ್ನೇ, ಅವರನ್ನೇ ನೀನೆಂದು ತಿಳಿಯುತ್ತೇವೆ. ತಿಳಿಯದೆ

ಕೈಯಿಟ್ಟರೂ ಬೆಂಕಿ ಸುಡುವುದಲ್ಲದೆ ಬಿಡದು. ಅದೇ ರೀತಿ ಅಜ್ಞಾನದಿಂದಾಗಿ ನಿನ್ನನ್ನು ಮರೆತು ಅನ್ನವನ್ನು ಉಪಾಸಿಸಿದ ಫಲವಾಗಿ ನಿಜವಾದ ಆನಂದದಿಂದ ವಂಚಿತರಾಗಿ ದುಃಖದ ಕಡಲಲ್ಲಿ ಮುಳುಗುವಂತಾಗುತ್ತದೆ. ಆದ್ದರಿಂದ ಹೇ ಪರಮ ದಯಾಘನ! ದುಃಖದ ಸಾಗರದಿಂದ ಪಾರಾಗಿ ಆನಂದದ ತೀರದತ್ತ ಸಾಗಲು, ದಂಡೆಯನ್ನು ತಲುಪಲು ಬೇಕಾದ ಸತ್ಯಜ್ಞಾನ, ಸತ್ಯದ ಅನುಷ್ಠಾನವನ್ನು ಮಾಡುವತ್ತ ನಮ್ಮ ಲಕ್ಷ್ಯ ಸದಾ ಜಾಗೃತವಾಗಿರಲಿ.

ಹೇ ಪರಮಸುಖಪ್ರದಾತನಾದ ಪರಮೇಶ್ವರ! ಮಾನವನು ಜೀವನದಲ್ಲಿ ಮಾಡುವ ಪ್ರತಿಯೊಂದು ಕಾರ್ಯವೂ ಸುಖವನ್ನು ಉದ್ದೇಶವಾಗಿಟ್ಟುಕೊಂಡೇ ಮಾಡಲ್ಪಡುತ್ತದೆ. ಆದರೆ ಪೂರ್ವದತ್ತ ನಡೆದು ಪಶ್ಚಿಮದ ತಾಣವನ್ನು ತಲುಪಲು ಸಾಧ್ಯವಾಗದಿರುವಂತೆ ದುಃಖ ದಾಯಕವಾದ ಮೇರೆ ತಪ್ಪಿದ ಭೋಗಮಾರ್ಗದಲ್ಲಿ ನಡೆದು, ಪ್ರಶಾಂತವಾದ ಮನಸ್ಥಿತಿಯನ್ನೂ, ಅಪ್ರತಿಹತವಾದ ಬುದ್ಧಿಮತ್ತೆಯನ್ನೂ, ಎಲ್ಲಕ್ಕಿಂತ ಹಿರಿದಾದ ಆತ್ಮಿಕ ಆನಂದವನ್ನು ಎಂದಿಗೂ ಪಡೆಯಲು ಸಾಧ್ಯವಿಲ್ಲ. ಭೌತಿಕ ಭೋಗಗಳನ್ನು ಒಂದು ಮಿತಿಯಲ್ಲಿ ಭೋಗಿಸುತ್ತಾ, ನಿನ್ನನ್ನು ಹೊಂದುವ ಲಕ್ಷ್ಯದ ಸಾಧನವಾಗಿ ಅವುಗಳನ್ನು ಬಳಸಿಕೊಂಡು ಸಾಗಿದರೆ ಮಾತ್ರ ನಿಜವಾದ ಸುಖ-ಶಾಂತಿಗಳು ನಮಗೆ ಲಭ್ಯವಾದೀತು! ಈ ರೀತಿ ನಿನ್ನ ಆಶ್ರಯಮಾತ್ರದಿಂದಲೇ ಲಭಿಸಬಹುದಾದ ಉತ್ತಮವಾದ ಸುಖಸಂತೋಷಗಳನ್ನು ಪಡೆಯಲು ಪ್ರಬಲ ಪುರುಷಾರ್ಥಗೈವ ಮನಸ್ಥೈರ್ಯವನ್ನು ನಮಗನುಗ್ರಹಿಸು.

ಓಂ ಶಾಂತಿಃ ಶಾಂತಿಃ ಶಾಂತಿಃ

---

॥ ಓಂ ॥ ಸತ್ಯಮೇವ ಜಯತೇ ನಾನೃತಂ ॥ ಓಂ ॥

## ವೇದಪ್ರಕಾಶದ-ಕಾಮನೆ

ಆದರಣೀಯ ಪ್ರಿಯ ಬಂಧು ಭಗಿನಿಯರೇ!

ಇಷ್ಟರಲ್ಲಿಯೇ ಶ್ರಾವಣೀ ವಿಶೇಷಾಂಕ ನಿಮಗೆ ತಲುಪಿ ಅದರಲ್ಲಿರುವ ವಿಷಯಗಳನ್ನು ಓದಿರುವಿರಲ್ಲವೇ? ಓದಿಲ್ಲವಾದರೆ ದಯಮಾಡಿ ಸ್ವಲ್ಪ ಗಮನವಿಟ್ಟು ಓದಿರಿ. ದೇಶವ್ಯಾಪೀ ನಡೆಯುತ್ತಿರುವ ಅನಿಷ್ಟಗಳು ಎಲ್ಲಾ ಪತ್ರಿಕೆಗಳಲ್ಲಿ ಪ್ರಕಟವಾಗಿದ್ದು ಸಾರ್ವಜನಿಕರು ಅದನ್ನು ಓದಿರಬಹುದು. ಈ ಅನಿಷ್ಟಗಳ ಬಗ್ಗೆ ನಾವು ಕಳೆದ ದುರ್ಮತಿ ಸಂವತ್ಸರದ ಚೈತ್ರ ಮಾಸದ ಸಂಚಿಕೆಯ ಮುಖಪುಟದಲ್ಲಿ ಸೂಚಿಸಿದ್ದೆವು. ಅದರ ವಿವರಗಳನ್ನು ವೈಶಾಖ ಮಾಸದ ಸಂಚಿಕೆಯ ಪುಟ ೪೪-೪೫ರಲ್ಲಿ ಪ್ರಕಟಿಸಿದ್ದೇವೆ. ಅದರ ಪರಿಹಾರದ ಮಾರ್ಗವನ್ನು ಶ್ರಾವಣೀ ವಿಶೇಷಾಂಕದಲ್ಲಿ ಪ್ರಕಟಿಸಿದ್ದು ತಾವು ಅದನ್ನು ಓದಿರಬಹುದು. ಈಗ ದುಂದುಭಿ ಸಂವತ್ಸರದಿಂದ ಇನ್ನೂ ಐದು ವರ್ಷಗಳಲ್ಲಿ ಬರಲಿರುವ ಸಂಕಷ್ಟಗಳ ಕಠಿಣವಾದ ದುರ್ದಿನಗಳನ್ನು ನಾವು ಎದುರಿಸಬೇಕಾಗುವುದು ನಿಶ್ಚಿತ. ಪ್ರಕೃತಿಯ ವಿಕೋಪಗಳನ್ನು ತಡೆಗಟ್ಟ

ಬೇಕಾದರೆ ರಾಜ್ಯದಾದ್ಯಂತ ಸತ್ಕರ್ಮಗಳು ಯಜ್ಞಮುಖೇನ ನಡೆಯಲೇಬೇಕು. ಪ್ರಾಚೀನ ಕಾಲದಲ್ಲಿ ರಾಜ-ಮಹಾರಾಜರುಗಳು ಇಂತಹ ಸಂಕಷ್ಟಗಳ ಪರಿಹಾರಕ್ಕಾಗಿ ಋಷಿಮುನಿಗಳಾದ ಜ್ಞಾನಿಗಳನ್ನು ಕರೆಸಿ, ವಿಶೇಷವಾದ ಯಜ್ಞಗಳನ್ನು ನಡೆಸಿ ಜನತೆಯ ಸಂಕಷ್ಟಗಳನ್ನು ಪರಿಹರಿಸಲು ಪ್ರಯತ್ನಿಸುತ್ತಿದ್ದರು. ಪ್ರಜಾಪ್ರಭುತ್ವವೆಂದು ಹೇಳುವ ನಮ್ಮ ಈ ರಾಷ್ಟ್ರದಲ್ಲಿ ಪ್ರಜೆಗಳಿಗೆ ಸುಖಶಾಂತಿಗಳು ದೊರಕಿ ಹರ್ಷದಾಯಕವಾದ ಜೀವನವನ್ನು ನಡೆಸಬೇಕಿತ್ತು. ಆರ್ಥಿಕವಾಗಿಯೂ, ಸಾಮಾಜಿಕವಾಗಿಯೂ ನಮಗೆ ಬರುತ್ತಿರುವ ಈ ಕಷ್ಟಗಳ ಬಗ್ಗೆ ಸರಕಾರ ತನ್ನ ಕರ್ತವ್ಯವನ್ನು ಸರಿಯಾಗಿ ನಿರ್ವಹಿಸುತ್ತಿದೆಯೇ—ಎಂಬುದನ್ನು ಗಮನಿಸಿದರೆ, ಶಾಸಕರು, ಮಂತ್ರಿಗಳು, ಪ್ರಧಾನಿ ಹಾಗೂ ರಾಷ್ಟ್ರಪತಿಯವರು ಕರ್ತವ್ಯಪ್ರಜ್ಞೆಯಿಲ್ಲದಂತೆ ನಡೆಯುತ್ತಿರುವುದನ್ನು ನೋಡುವಾಗ ಪ್ರಜೆಗಳ ಕಷ್ಟ ಪರಿಹಾರವಾಗುವ ಸಂಭವವಿಲ್ಲವೆಂದು ತೋರುತ್ತದೆ. ಇತಿಹಾಸದ ಅಧ್ಯಯನ ಮಾಡಿದಾಗ ರಾಜಾ ಅಶ್ವಪತಿಯು ತನ್ನ ರಾಜ್ಯದ ಹಾಗೂ ಪ್ರಜೆಗಳ ಬಗೆಗೆ ಈ ರೀತಿ ಎದೆತಟ್ಟಿ ಘೋಷಿಸುತ್ತಿದ್ದನು:

**ನ ಮೇ ಸ್ತೇನೋ ಜನಪದೇ ನ ಕದರ್ಯೋ ನ ಮದ್ಯಪಃ ।**
**ನಾನಾಹಿತಾಗ್ನಿರ್ನಾವಿದ್ವಾನ್ ನ ಸ್ವೈರೀ ಸ್ವೈರಿಣೀ ಕುತಃ ॥**

[ಛಾಂದೋಗ್ಯ:-ಅ-೫ ಖಂಡ ೧೧]

"ನನ್ನ ರಾಜ್ಯದಲ್ಲಿ ಕಳ್ಳನಿಲ್ಲ; ದುರಾಚಾರಿಯೂ, ಲೋಭಿಯೂ ಇಲ್ಲ. ಮದ್ಯಪಾಯಿಯೂ ಇಲ್ಲ; ಹೋಮ ಮಾಡದವನಿಲ್ಲ. ವಿದ್ಯಾವಿಹೀನನೂ ಇಲ್ಲ. ವ್ಯಭಿಚಾರಿಯೇ ಇಲ್ಲ. ಎಂದಮೇಲೆ ವ್ಯಭಿಚಾರಿಣಿಯರಿರಲು ಹೇಗೆ ಸಾಧ್ಯ?"

ಮಹಾತ್ಮಾ ಗಾಂಧಿಯವರು ಅಹೋರಾತ್ರಿ ರಾಮರಾಜ್ಯದ ಕಲ್ಪನೆ ಮಾಡುತ್ತಿದ್ದರು. ಸ್ವಾತಂತ್ರ್ಯ ಸಿಕ್ಕಿದೊಡನೆ ತನ್ನೀ ರಾಷ್ಟ್ರವನ್ನು ರಾಮರಾಜ್ಯದಂತೆ ನಿರ್ಮಾಣ ಮಾಡಿ ಪ್ರಜೆಗಳು ಸದಾ ಸುಖಿಗಳಾಗಿರಬೇಕೆಂದು ಆಶಿಸುತ್ತಿದ್ದರು. ರಾಮರಾಜ್ಯದ ಸ್ಥಿತಿಯನ್ನು ಮಹರ್ಷಿ ವಾಲ್ಮೀಕಿಯವರು ಈ ರೀತಿ ಚಿತ್ರಿಸಿದ್ದಾರೆ:

**ನಪರ್ಯದೇವನ್ ವಿಧವಾ ನಚ ವ್ಯಾಲಕೃತಂ ಭಯಂ ।**
**ನ ವ್ಯಾಧಿಜಂ ಭಯಂವಾಪಿ ರಾಮೇ ರಾಜ್ಯಂ ಪ್ರಶಾಸತಿ ॥ ೯೮ ॥**
**ನಿರ್ದಸ್ಯುರಭವಲ್ಲೋಕೋ ನಾರ್ಥಃ ಕಂಚಿದ ಸ್ಪೃಶತ್ ।**
**ನ ಚಸ್ಮ ವೃದ್ಧಾ ಬಾಲಾನಾಂ ಪ್ರೇತಕಾರ್ಯಾಣಿ ಕುರ್ವತೇ ॥ ೯೯ ॥**
**ಸರ್ವಂ ಮುದಿತಮೇವಾಸೀತ್ ಸರ್ವೋ ಧರ್ಮಪರೋಽಭವತ್ ।**
**ರಾಮಮೇವಾನು ಪಶ್ಯಂತೋ ನಾಭ್ಯಹಿಂಸನ್ ಪರಸ್ಪರಂ ॥ ೧೦೦ ॥**
**ನಿತ್ಯಪುಷ್ಪಾ ನಿತ್ಯಫಲಾಸ್ತರವಃ ಸ್ಕಂಧವಿಸ್ತೃತಾಃ ।**
**ಕಾಲೇ ವರ್ಷೇಚ ಪರ್ಜನ್ಯಃ ಸುಖಸ್ಪರ್ಶಶ್ಚ ಮಾರುತಃ ॥ ೧೦೧ ॥**

[ಯುದ್ಧಕಾಂಡ: ೧೩೧]

"ರಾಮನು ರಾಜ್ಯವಾಳುತ್ತಿದ್ದಾಗ ವಿಧವೆಯರು ಗೋಳಾಡುವ ಪ್ರಸಂಗ ಬರುತ್ತಿರಲಿಲ್ಲ. ವಿಷಕ್ರಿಮಿ-ಕೀಟಗಳ ಅಥವಾ ರೋಗಗಳ ಭಯವಿರಲಿಲ್ಲ. ಕಳ್ಳಕಾಕರ ಪೀಡೆಯಿರ

ಲಿಲ್ಲ. ಯಾರಿಗೂ ದಾರಿದ್ರ್ಯವಿರಲಿಲ್ಲ. ಮುದುಕರು ಬಾಲಕರ ಪ್ರೇತಸಂಸ್ಕಾರ ಮಾಡುವ ಕಹಿ ಪ್ರಸಂಗ ಒದಗುತ್ತಲೇ ಇರಲಿಲ್ಲ. ಎಲ್ಲವೂ ನಗುತ್ತಿತ್ತು. ಎಲ್ಲರೂ ಧಾರ್ಮಿಕರಾಗಿದ್ದರು. ರಾಮನನ್ನು ನೋಡಿ ಯಾರೂ ಯಾರನ್ನೂ ಪೀಡಿಸುತ್ತಿರಲಿಲ್ಲ. ಮರಗಿಡಗಳು ಯಾವಾಗಲೂ ಹೂ ಬಿಡುತ್ತಿದ್ದವು. ಹಣ್ಣು ಕೊಡುತ್ತಿದ್ದವು. ಕಾಲಕಾಲಕ್ಕೆ ಮಳೆಯಾಗುತ್ತಿತ್ತು; ಗಾಳಿ ಹಿತಕರವಾಗಿ ಬೀಸುತ್ತಿತ್ತು."

ಇದನ್ನು ನಮ್ಮ ಶಾಸಕರು, ರಾಜ್ಯಮಂತ್ರಿಗಳು, ಮುಖ್ಯಮಂತ್ರಿಗಳು, ಲೋಕಸಭಾ ಸದಸ್ಯರು ಮತ್ತು ಇತರ ಮಂತ್ರಿಗಳು ಹಾಗೂ ಪ್ರಧಾನ ಮಂತ್ರಿ ಮತ್ತು ರಾಷ್ಟ್ರಪತಿಗಳು ಅತೀ ಅಗತ್ಯವಾಗಿ ಇದನ್ನು ಪರಿಶೀಲಿಸಬೇಕು. ಏಕೆಂದರೆ **"ಯಥಾ ರಾಜಾ ತಥಾ ಪ್ರಜಾ"** ಎಂಬಂತೆ ಪ್ರಜಾಪಾಲಕರು, ದುರ್ವ್ಯಸನಿಗಳೂ, ವಿಷಯಲಂಪಟರೂ, ದುರಾಚಾರಿಗಳೂ, ಭ್ರಷ್ಟಾಚಾರದಿಂದ ಅರ್ಥ ಸಂಪಾದನೆ ಮಾಡುವವರೂ ಆದರೆ ಪ್ರಜೆಗಳು ಅದನ್ನೇ ಆದರ್ಶವೆಂದು ತಿಳಿದು ಅದೇ ರೀತಿ ದುರ್ಮಾರ್ಗಗಾಮಿಗಳಾಗುವರು. ಯಾವ ರಾಷ್ಟ್ರದಲ್ಲಿ ಪ್ರಜಾಪಾಲಕರು, ಧರ್ಮಾತ್ಮರೂ ಸದಾಚಾರಿಗಳೂ ಸಚ್ಚರಿತ್ರರೂ ಆದರೆ ಪ್ರಜೆಗಳೆಲ್ಲರೂ ಅದೇ ಆದರ್ಶವನ್ನು ತಮ್ಮ ಜೀವನದಲ್ಲಿ ನಡೆಸಿಕೊಂಡು ಸನ್ಮಾರ್ಗ ಪ್ರವರ್ತಕರಾಗುವರು. ಗೀತಾಚಾರ್ಯನಾದ ಶ್ರೀಕೃಷ್ಣನು ಅರ್ಜುನನಿಗೆ ಉಪದೇಶ ಮಾಡುವಾಗ

**ಯದ್ಯದಾಚರತಿಃ ಶ್ರೇಷ್ಠ ತತ್ತದೇವೇತರೋ ಜನಾಃ ।**
**ಸ ಯತ್ಪ್ರಮಾಣಂ ಕುರುತೇ ಲೋಕಸ್ತದನು ವರ್ತತೇ ॥** [ಗೀತಾ: ೩-೨೧]

"ಶ್ರೇಷ್ಠನಾದವನು ಯಾವುದನ್ನು ಆಚರಿಸುತ್ತಾನೋ, ಇತರ ಜನಗಳೂ ಅದನ್ನೇ ಆಚರಿಸುತ್ತಾರೆ. ಅವನು (ಶ್ರೇಷ್ಠ ವ್ಯಕ್ತಿ) ಯಾವುದನ್ನು ಪ್ರಮಾಣವೆಂದು ತಿಳಿದು ಮಾಡುತ್ತಾನೋ ಅದನ್ನೇ ಲೋಕದ ಜನರು ಅನುಸರಿಸುತ್ತಾರೆ." ಎಂದು ಹೇಳಿದ್ದಾನೆ.

ಈ ವಿಷಯಗಳೆಲ್ಲಾ ಪುಸ್ತಕದಲ್ಲಿ ಪ್ರಕಟವಾದರೆ ಸಾಲದು. ಅದನ್ನು ಅನುಷ್ಠಾನಕ್ಕೆ ತರಬೇಕು. ಇದರ ಬಗ್ಗೆ ಆಳುವವರೇ ಚಾರಿತ್ರ್ಯಹೀನರಾದರೆ ಪ್ರಜೆಗಳನ್ನು ಅಂಕಿತದಲ್ಲಿಡುವುದು ಕಷ್ಟ. ಇಂತಹ ಸಂದರ್ಭಗಳಲ್ಲಿ ರಾಜ್ಯವಾಳುವವರು ನಿರ್ದಾಕ್ಷಿಣ್ಯವಾಗಿ ಕಠೋರವಾದ ದಂಡ ವಿಧಿಸಬೇಕಾಗುತ್ತದೆ. ಅಧಃಪತನಕ್ಕೆ ಕಾರಣವಾದ ಯಾವ ವಸ್ತುಗಳನ್ನೂ ರಾಷ್ಟ್ರದಲ್ಲಿ ಉತ್ಪಾದನೆ ಮಾಡದಂತೆ ಪೂರ್ಣವಾಗಿ ಪ್ರತಿಬಂಧಕವನ್ನು ಜಾರಿಗೆ ತಂದರೆ ಪ್ರಜೆಗಳು ದುರ್ವ್ಯಸನಗಳಲ್ಲಿ ಬೀಳದೆ ಸದಾಚಾರ ಸಂಪನ್ನರಾಗಿ ರಾಷ್ಟ್ರೀಯಪ್ರಜ್ಞೆ ಉಳ್ಳವರಾಗುವರು. ಯಾವ ಮಾರ್ಗದಲ್ಲಿಯಾದರೂ ಅರ್ಥಸಂಚಯ ಮಾಡುವುದು ಮುಖ್ಯವೆಂದು ತಿಳಿದ ಸರಕಾರ ಅಮಲು ಪದಾರ್ಥಗಳನ್ನು ಸರಕಾರವೇ ತಯಾರಿಸುತ್ತಾ, ಯಾವ ನಿರ್ಬಂಧವೂ ಇಲ್ಲದೆ ವಿತರಣೆಮಾಡಿ ಎಲ್ಲರೂ ಸೇವಿಸಬಹುದೆಂಬ ಕಾರಣದಿಂದಾಗಿ ಇಂದಿನ ದಿನಗಳಲ್ಲಿ ವಿದ್ಯಾರ್ಥಿಗಳು, ವಿದ್ಯಾರ್ಥಿನಿಯರು ಆದಿಯಾಗಿ ಸರ್ವರೂ ಅನೈತಿಕ ಸಂಬಂಧವನ್ನು ಬೆಳೆಸಿಕೊಂಡು ಕಳ್ಳತನ, ದರೋಡೆ, ಕೊಲೆ, ಸುಲಿಗೆ ಎಲ್ಲಾ ವಿಧವಾದ ಭ್ರಷ್ಟಾಚಾರಕ್ಕೆ ಪ್ರವೃತ್ತರಾಗಿ ತಾವೂ ಅಧಃಪತನಕ್ಕೆ ಇಳಿಯುವುದಲ್ಲದೆ ಮುಂದಿನ ಜನಾಂಗವನ್ನು ನಿಷ್ಕ್ರಿಯರೂ, ನಿರ್ಬಲರೂ ಆಗುವಂತೆ ಮಾಡುತ್ತಾ ಸರ್ವತ್ರ ಅಶಾಂತಿಗೆ ಕಾರಣರಾಗಿ ರಾಷ್ಟ್ರೀಯ ಸಂಪತ್ತುಗಳನ್ನು ನಾಶಮಾಡುತ್ತಾ ಹಿಂಸೆ ಮತ್ತು ಅತ್ಯಾಚಾರಗಳು ಮಿತಿಮೀರಿ

ಬೆಳೆಯುತ್ತಿವೆ. ಇದಕ್ಕೆ ಸರಕಾರವೇ ಕಾರಣವೆಂದು ಬೇರೆ ಹೇಳಬೇಕಾಗಿಲ್ಲ. ಕುವೈಟ್, ಅಬುದಾಭಿ ಮೊದಲಾದ ರಾಷ್ಟ್ರಗಳಲ್ಲಿ ಕಳ್ಳತನಕ್ಕೂ, ವ್ಯಭಿಚಾರಕ್ಕೂ, ಮದ್ಯಪಾನಕ್ಕೂ ಪ್ರತಿಬಂಧ ಹಾಕಿರುವುದಲ್ಲದೆ ಅದರ ಬಗ್ಗೆ ಕಠಿಣವಾದ ಶಿಕ್ಷೆಗಳನ್ನು ಕೊಡುತ್ತಾ ಅಲ್ಲಿ ಹೆಚ್ಚಿನ ಕಳ್ಳತನವಾಗಲಿ-ಜೂಜು ಇತ್ಯಾದಿ ದುಷ್ಟ ವ್ಯವಹಾರಗಳಾಗಲಿ ನಡೆಯುತ್ತಿಲ್ಲ-ಎಂಬುದನ್ನು ಕೇಳುತ್ತಿದ್ದೇವೆ. ನಮ್ಮ ರಾಷ್ಟ್ರದಲ್ಲಿ ಬ್ರಿಟಿಷರ ಕಾಲದಲ್ಲಿ ಅಮಲು ಸೇವನೆ ಮಾಡಬಾರದೆಂದು ಮಹಾತ್ಮಾ ಗಾಂಧಿಯವರು, ಕಾಂಗ್ರೆಸ್ ಪಕ್ಷ ಹರತಾಳವೇ ಮೊದಲಾದ ಸಕ್ರಿಯ ಕಾರ್ಯಕ್ರಮಗಳಿಂದ ಪಾನ ಪ್ರತಿಬಂಧಕಕ್ಕೆ ತಮ್ಮ ಜೀವನವನ್ನು ಮುಡುಪಾಗಿಟ್ಟು, ಶ್ರೀಮಂತರು ಮತ್ತು ಬಡವರೆನ್ನದೆ ಕಾರಾಗೃಹವನ್ನು ಸೇರಿ ಬಹಳಷ್ಟು ಕಷ್ಟಪಟ್ಟಿದ್ದಾರೆ. ಅದೇ ಕಾಂಗ್ರೆಸ್ಸು ರಾಜ್ಯಾಡಳಿತವನ್ನು ಕೈಗೊಂಡ ಮೇಲೆ ಕೆಲವು ಕಡೆ ಪಾನಪ್ರತಿಬಂಧವನ್ನು ಮಾಡುತ್ತಾ ಅದರಿಂದ ಒದಗಬಹುದಾದ ನಷ್ಟವನ್ನು ತುಂಬಿಸಲು ಸೇಲ್ಸ್‌ಟ್ಯಾಕ್ಸ್ (ಮಾರಾಟ ತೆರಿಗೆ) ಜಾರಿಗೆ ತಂದಿದ್ದರು. ಸಾರ್ವತ್ರಿಕವಾಗಿ ದೇಶವ್ಯಾಪೀ ಜಾರಿಗೆ ತರಲಿಲ್ಲ. ಕಾರಣ ಮುಖಂಡರಲ್ಲೇ ಹೆಚ್ಚಿನವರು ಪಾನಪ್ರಿಯರಾಗಿದ್ದರು. ತಮ್ಮ ಈ ದುರ್ಗುಣಗಳನ್ನು ನೀಗಿಸಿಕೊಳ್ಳಲಾಗದೆ ಕೆಲವು ಜನರ ಮೂಲಕ ಪ್ರಚೋದಿಸಿ ಪುನಃ ಜಾರಿಗೆ ತಂದರು. ಅದೀಗ ವ್ಯಾಪಾರವಾಗಿ ಬೆಳೆದು ಸರಕಾರಕ್ಕೆ ಹೆಚ್ಚಿನ ಲಾಭವನ್ನು ಗಳಿಸಿಕೊಡುವಂತಹ ವ್ಯವಹಾರವಾದರೂ ಅದರಿಂದುಂಟಾಗುವ ಬಡತನ ಹಾಗೂ ಇತರ ರೋಗಗಳು ಪ್ರಬಲವಾದು ದಲ್ಲದೆ ನೈತಿಕತೆಯೇ ಇಲ್ಲದಂತಾಗಿ ಕುಲೀನ ಮನೆತನದ ಹೆಣ್ಣು ಮಕ್ಕಳು ರಸ್ತೆಯಲ್ಲಿ ತಿರುಗು ವುದು ಕಷ್ಟಕರವಾಗಿ ಪರಿಣಮಿಸಿದೆ. ವಾಹನಗಳ ಎಕ್ಸಿಡೆಂಟ್ ದಿನೇ ದಿನೇ ಹೆಚ್ಚಾಗುತ್ತಾ ಇರುವುದು ಈ ಕುಡಿತದ ಕಾರಣದಿಂದಲೇ. ವೇಶ್ಯಾವಾಟಿಕೆಗಳೂ ಬೆಳೆಯುತ್ತಿರುವುದೂ ತುಂಬಾ ಕುಡಿತದ ಕಾರಣದಿಂದಲೇ. ಆರೋಗ್ಯ ರಕ್ಷಣೆಗಾಗಿ ಸರಕಾರ ತಯಾರಿಸು ತ್ತಿದ್ದ ಔಷಧಗಳಲ್ಲಿ ಅರ್ಧಾಂಶದಷ್ಟು ಸಹ ಸರಕಾರೀ ಆಸ್ಪತ್ರೆಗಳಿಗೆ ಸಿಗದೆ ಒಳಗಿಂದೊಳಗೆ ಮಾರಾಟವಾಗುತ್ತಿರುವುದು ಕೇಳಿಬರುತ್ತಿದೆ. ಇಂತಹ ಅನೀತಿಯ ವ್ಯವಹಾರಕ್ಕೆ ಕುಡಿತವೇ ಪ್ರಬಲವಾದ ಕಾರಣವಾಗಿ ಕಂಡುಬರುತ್ತಿದೆ. ರೋಗವನ್ನು ತಾವೇ ಉತ್ಪನ್ನಮಾಡಿ ಅದರ ಪರಿಹಾರಕ್ಕಾಗಿ ಔಷಧಿಗಳನ್ನು ತಯಾರಿಸಲು ಹಣದ ದುರ್ವಿನಿಯೋಗ ಮಾಡುವುದು ಬುದ್ಧಿ ವಂತಿಕೆಯ ಲಕ್ಷಣವಲ್ಲ. ಪ್ರತಿಯೊಂದು ಕ್ಷೇತ್ರದಲ್ಲಿಯೂ ಈ ರೀತಿಯ ಭ್ರಷ್ಟಾಚಾರ ತುಂಬಿಹೋಗಿದೆ. ಇದಕ್ಕೇನಾದರೂ ವಿಮೋಚನೆ ಇದೆಯೇ? ಈ ಪ್ರಶ್ನೆಗೆ ಉತ್ತರಿಸುವುದು ಬಹು ಕಷ್ಟ. ಆದ್ದರಿಂದ ಬುದ್ಧಿಜೀವಿಗಳು ಇದರ ಬಗ್ಗೆ ಚಿಂತನೆಮಾಡಿ ಇದರ ನಿವಾರಣೆಗೆ ಒಂದು ಮಾರ್ಗವನ್ನು ಕಂಡುಹಿಡಿಯುವುದು ಅತೀ ಅಗತ್ಯ. ಜನಹಿತಕ್ಕಾಗಿ ಮಾಡುವ ಕಾನೂನಿಗೆ ಸರ್ವರೂ ತಲೆಬಾಗಬೇಕು. ಅದನ್ನು ಉಲ್ಲಂಘನೆ ಮಾಡಿ, ಅಹಿತವೆಸಗುವುದು ಸರಿಯಲ್ಲ. ರೆವೆನ್ಯೂ ಹೆಚ್ಚು ಸಿಗುತ್ತದೆ ಎಂದು ಪ್ರಜಾಪೀಡನೆಗೆ, ಅನೈತಿಕತೆಗೆ ಉತ್ತೇಜನ ಕೊಡುವ ಎಲ್ಲಾ ವ್ಯವಹಾರಗಳನ್ನೂ ನಿಲ್ಲಿಸಿ, ಪ್ರಜಾಹಿತವನ್ನು ಸಾಧಿಸಬೇಕು. ಅದಕ್ಕಾಗಿ ಸರ್ವರೂ ದೃಢಪ್ರತಿಜ್ಞೆ ಮಾಡಬೇಕು. ಅಂತಹ ಶಕ್ತಿಯನ್ನು ಪರಮಾತ್ಮನು ನಮಗೆಲ್ಲರಿಗೂ ದಯಪಾಲಿಸಲಿ.

---

# ವೇದಗಳಲ್ಲಿ ನಮಗೇಕೆ ಇಷ್ಟು ಶ್ರದ್ಧೆ?

● ಪಂ॥ ಸುಧಾಕರ ಚತುರ್ವೇದೀ

ವೇದಗಳಲ್ಲಿ ನಮಗಿರುವ ಶ್ರದ್ಧೆ ಕೇವಲ ಪರಂಪರಾಗತವಾಗಿ ಬಂದುದಲ್ಲ, ಅದರಲ್ಲಿರುವ ವೈಜ್ಞಾನಿಕ, ಸಾರ್ವಭೌಮಿಕ ತತ್ವಗಳು ಜಗತ್ತಿನ ಎಲ್ಲಾ ನಿಷ್ಪಕ್ಷಪಾತ ವಿದ್ವಾಂಸರ ಮನ್ನಣೆಗೆ ಪಾತ್ರವಾಗಿವೆ. ಪಾಶ್ಚಿಮಾತ್ಯರ ಅಂಧಾನುಕರಣೆಯು ಭಾರತೀಯ ಶಿಕ್ಷಿತರಲ್ಲಿ ಹೆಚ್ಚುತ್ತಿದ್ದು, ಸ್ವಾತಂತ್ರ್ಯ ನಂತರ ಅದು ಮತ್ತೂ ಹೆಚ್ಚಳವಾಗಿದೆ. ಅಂಥವರಿಗೆ ಜಗದ್ವಿಖ್ಯಾತ ಪಾಶ್ಚಿಮಾತ್ಯ ದಾರ್ಶನಿಕರಾದ ನೋಬೆಲ್ ಪಾರಿತೋಷಕ ವಿಜೇತ ಮಿ॥ ಮೆಟರ್ ಲಿಂಕ್ (Materlinck) ವೇದಗಳ ಬಗ್ಗೆ ಹೇಳಿರುವ ಈ ಮಾತುಗಳು ವೇದಗಳ ನಿಜವಾದ ಮಹತ್ತ್ವವನ್ನು ತೋರಿಸಲು ಸಾಕಾಗಿರುತ್ತವೆ:—

**"Only the gaze of clairvoyant, directed upon the mysteries of the past, may reveal unuttered wisdom, which lies hidden behind these wr tings-the vedas.**

**"whence did our Pre-historic ancestors, in their supposed terrible state of ignoranee and abandonment, derive these extra-ordinary intuitions that knowledge and assurance, which we ourselves are reconquering?"**

**[The Great Secret By Macterlinck.]**

"ಅತೀತದ ರಹಸ್ಯಗಳ ಕಡೆ ತಿರುಗಿಸಿದ ಅತೀಂದ್ರಿಯ ಪ್ರತ್ಯಕ್ಷದನೋಟ ಮಾತ್ರ, ವೇದಗಳೆಂಬ ಈ ಲೇಖನಗಳ ಹಿಂದೆ ಅಡಗಿರುವ, ಮತ್ತಾರೂ ಹೇಳದ ಅಸಾಧಾರಣ ಜ್ಞಾನವನ್ನು ಹೊರಗೆಡಹಬಲ್ಲದು.

ಭಯಾನಕವೆಂದು ಭಾವಿಸಲ್ಪಟ್ಟಿರುವ, ಅವರ ಅಜ್ಞಾನದ ಹಾಗೂ ಸಂಬಂಧರಾಹಿತ್ಯದ ಸ್ಥಿತಿಯಲ್ಲಿದ್ದ ನಮ್ಮ ಪ್ರಾಗೈತಿಹಾಸಿಕ ಪೂರ್ವಜರಿಗೆ, ನಾವೇ ಇಂದು ಪುನಃ ಗಳಿಸಲು ಯತ್ನಿಸುತ್ತಿರುವ ಈ ಅಸಾಧಾರಣ ಅಂತಃಸ್ಫೂರ್ತಿ, ಆ ಜ್ಞಾನ ಮತ್ತು ದಾರ್ಢ್ಯ ಎಲ್ಲಿಂದ ಲಭಿಸಿತು?"

ಈ ಬಗೆಯ ವಿದೇಶೀಯ ದಾರ್ಶನಿಕರ, ವೈಜ್ಞಾನಿಕರ ಹಾಗೂ ವಿದ್ವಾಂಸರ ಗೌರವಕ್ಕೂ ಪಾತ್ರವಾದ ವೇದಗಳು, ವಸ್ತುತಃ ಕಾಡುಕುರುಬರ ಹಾಡುಗಳಾಗಿರಲಾರವು. ನಿಜವಾಗಿ, ವೇದಗಳಲ್ಲಿನ ಒಂದೊಂದು ಮಂತ್ರವೂ ಆತ್ಮವಿಕಾಸದ ಉತ್ಕೃಷ್ಟ ಸಾಧನವನ್ನು ನಮ್ಮ ಮುಂದಿಡುತ್ತದೆ.

ವೇದಗಳಲ್ಲಿ ನಮಗೇಕೆ ಶ್ರದ್ಧೆ? ಮೊದಲನೆಯದಾಗಿ, ಅವು ಅತಿಮಾನವ ಅಥವಾ ಅಪೌರುಷೇಯ ಜ್ಞಾನದ, ಪರಮಾತ್ಮನ ನಿರ್ದೋಷವಾದ ಹಾಗೂ ನಿಷ್ಪಕ್ಷಪಾತವಾದ ಸರ್ವಜೀವ ಹಿತಕಾರೀ ಜ್ಞಾನದ ಆಗರವಾಗಿರುವುದೇ ನಮ್ಮ ಶ್ರದ್ಧೆಗೆ ಕಾರಣ. ಜಗತ್ತಿನಲ್ಲಿ ಶಾಸ್ತ್ರಗಳು, ಗಾಸ್ಪೆಲ್ಸ್, ಇಲ್‌ಹಾಮ್—ಎಂದು ಮೊದಲಾಗಿ ಕರೆಯಲ್ಪಡುವ ಗ್ರಂಥಗಳ

ಗೇನೂ ಕಡಿಮೆಯಿಲ್ಲ. ಆದರೆ–ಅವುಗಳಿಗೆ ಸಾರ್ವಭೌಮ ದೃಷ್ಟಿಯೇ ಇಲ್ಲ. ಕೆಲವು ಭಾರತ ವರ್ಷದ ಪ್ರಶಂಸಾಗಾನ ಮಾಡುವುದಾದರೆ, ಕೆಲವು ಜೆರೂಸಲೆಮನ್ನೋ, ಅರಬಿಯ ವನ್ನೋ ಪವಿತ್ರಕ್ಷೇತ್ರವೆಂದು ಸಾರುತ್ತದೆ. ಯಾವುದೋ ಒಂದು ಜಾತಿ, ಕಾಲ ಅಥವಾ ದೇಶದ ಹಿತಕ್ಕೆ ಸಾಧಕವಾಗುವ ಸಿದ್ಧಾಂತಗಳನ್ನು ಸಾರುವ ಶಾಸ್ತ್ರಗಳು ಬೇಕಾದಷ್ಟಿವೆ. ಆದರೆ, ವೇದಗಳಂತೆ ಪೂರ್ಣ ನಿಷ್ಪಕ್ಷಪಾತವಾದ ಸಾರ್ವಕಾಲಿಕ ಸಾರ್ವಭೌಮ ಧರ್ಮವನ್ನು ಸಾರುವ ಶಾಸ್ತ್ರಗಳು ಬೇರಾವುವಿವೆ? ನೋಡಿರಿ, ನಮ್ಮ ಶ್ರದ್ಧೆಗೆ ಕಾರಣವನ್ನು:—

**ದ್ಯೌರ್ನಃ ಪಿತಾ ಪೃಥಿವೀ ಮಾತಾ ಸೋಮೋ ಭ್ರಾತಾಽದಿತಿಃ ಸ್ವಸಾ ।**
**ಅದೃಷ್ಟಾ ವಿಶ್ವದೃಷ್ಟಾಸ್ತಿಷ್ಠತೇಲಯತಾ ಸು ಕಮ್ ॥**

[ಋಗ್ವೇದ:- ೧-೧೯೧-೬]

"[ದ್ಯೌಃ] ಪ್ರಕಾಶಮಯ ದೇವನು, [ನಃ] ನಿಮ್ಮ, [ಪಿತಾ] ತಂದೆ, [ಪೃಥಿವೀ] ಭೂಮಿಯು, [ಮಾತಾ] ತಾಯಿ, [ಸೋಮ] ವಿವೇಕ, [ಭ್ರಾತಾ] ಸೋದರ, [ಅದಿತಿ] ಅಖಂಡತೆಯು, ಸ್ವಾತಂತ್ರ್ಯವು, [ಸ್ವಸಾ] ಸೋದರಿ, [ಅದೃಷ್ಟಾ] ಕಾಣಿಸದಿರುವ ಜೀವರೂ, [ಚ] ಮತ್ತು, [ವಿಶ್ವದೃಷ್ಟಾ] ಕಾಣಿಸುತ್ತಿರುವ ಸಕಲಜೀವರೂ, [ಸು] ಚೆನ್ನಾಗಿ, [ಕಂ] ಸುಖವಾಗಿ, [ಮೋದತ] ನಲಿದಾಡುತ್ತಿರಿ, [ಇಳಯತ] ತಿನ್ನುತ್ತಿರಿ, ಜೀವನವನ್ನು ಅನುಭವಿಸುತ್ತಿರಿ." ಇದೊಂದು ಮಂತ್ರವೇ ಸಾಲದೇ ವೇದಗಳಲ್ಲಿ ಗಂಭೀರವಾದ ಶ್ರದ್ಧೆ ಹುಟ್ಟಿಸಲು? ಸಾರ್ವಭೌಮ ಧರ್ಮದ ಸ್ವರೂಪವನ್ನು ಇದಕ್ಕಿಂತ ಚೆನ್ನಾಗಿ ವರ್ಣಿಸಲಾದೀತೇ? ಈ ಮಂತ್ರದ ಕಡೆ ವಿವೇಚನಾತ್ಮಕವಾದ ದೃಷ್ಟಿಯನ್ನು ಬೀರಿರಿ. ಸುಖವಾಗಿ ಬಾಳಬೇಕು; ಬದುಕಬೇಕು. ಎಂಬ ಹಂಬಲು ಪ್ರತಿಯೊಬ್ಬ ಜೀವನಿಗೂ ನಿಸರ್ಗಸಿದ್ಧ. ಧರ್ಮದ ತಳಹದಿಯೇ 'ಜಿಜೀವಿಷಾ'–ಎಂದರೆ ಜೀವಿಸಬೇಕೆಂಬ ಆಸೆ. ಈ ಜೀವಿಸಬೇಕೆಂಬ ಆಸೆಯೇ ಜಗತ್ತಿನಲ್ಲಿ ನಡೆಯುವ ಸಮಸ್ತ ಪ್ರವೃತ್ತಿಗಳ–ವ್ಯವಹಾರಗಳ–ಪ್ರೇರಕಶಕ್ತಿಯಾಗಿದೆ. ಜೀವಿಸಲಾಸೆಯಿಲ್ಲದ ಜೀವನೇ ಇಲ್ಲ. ಸ್ವತಃ 'ಜೀವ' ಎಂಬ ಶಬ್ದವೇ 'ಜೀವಿತ ಚೇತನಾಯುಕ್ತ' ಎಂಬರ್ಥವನ್ನುಳ್ಳುದಾಗಿದೆ. ಹೀಗಿರಬೇಕಾದರೆ, "ಪ್ರಪಂಚದಲ್ಲಿ ಹುಟ್ಟುವುದೇ ದುಃಖಕರ"–ಎಂಬ ಅಪಸ್ವರಗಳನ್ನು ತೆಗೆಯುವ ಮತಗ್ರಂಥಗಳ ಕೂಗು ಸ್ವತಃ ಬಾಳಿ–ಬದುಕಲಾಗದ ಹತಾಶರ ಕೂಗಲ್ಲದೇ ಬೇರೇನೂ ಅಲ್ಲ. ವೇದಗಳ ಕರೆಯನ್ನು ನೋಡಿರಿ:—

**ಅಯಂ ಲೋಕಃ ಪ್ರಿಯತಮೋ ದೇವಾನಾಮಪರಾಜಿತಃ ।**
**ಯಸ್ಮೈತ್ವಮಿಹ ಮೃತ್ಯವೇ ದಿಷ್ಟಃ ಪುರುಷ ಜಜ್ಞಿಷೇ ಸ ಚ**
**ತ್ವಾನು ಹ್ವಯಾಮಸಿ ಮಾಪುರಾ ಜರಸೋ ಮೃಥಾಃ ॥**

[ಅಥರ್ವ:-೫-೩೦-೧೭]

"[ಅಯಂ ಲೋಕಃ] ಈ ಲೋಕವು, [ಅಪರಾಜಿತಃ] ಯಾರಿಗೂ ಸೋಲದುದಾಗಿ, [ದೇವಾನಾಂ] ವಿದ್ವಜ್ಜನರಿಗೆ, [ಪ್ರಿಯತಮಃ] ಅತ್ಯಂತ ಪ್ರಿಯವಾಗಿದೆ, [ಪುರುಷ] ಜೀವನೇ! [ತ್ವಂ] ನೀನು, [ಯಸ್ಮೈ] ಯಾವ, [ಮೃತ್ಯವೇ] ಸಾವಿಗೆ, [ದಿಷ್ಟಃ] ಕೊಡಲ್ಪಟ್ಟವನಾಗಿ, [ಜಜ್ಞಿಷೇ] ಹುಟ್ಟುತ್ತೀಯೋ, [ಸಚ] ಆ ಸಾವೂ, (ಮತ್ತು ನಾವು) [ತ್ವಾ] ನಿನ್ನನ್ನು, [ಅನುಹ್ವಯಾಮಸಿ] ಎಚ್ಚರಿಸುತ್ತಿದ್ದೇವೆ, [ಜರಸಃಪುರಾ] ಮುಪ್ಪಿಗೆ ಮುನ್ನ, [ಮಾಮೃ

ಥಾಃ] ಸಾಯಬೇಡ" ಒಂದೊಂದು ವಾಕ್ಯವೂ ಒಂದೊಂದು ಅನರ್ಘ್ಯ ರತ್ನದಂತಿವೆ. ಅಥರ್ವವೇದ, ವಿದ್ವಾಂಸರಾದ ಆಚಾರ್ಯರುಗಳ ಬಾಯಿನಿಂದ, ಪ್ರತಿಯೊಬ್ಬ ಮಾನವನಿಗೂ ಭವ್ಯವಾದ ಆದೇಶ ಕೊಡಿಸುತ್ತಲಿದೆ. ಹುಟ್ಟಿದವನು ಸಾಯಲೇಬೇಕು—ಎಂಬುದು ಸತ್ಯ. ಆದರೆ ಹುಟ್ಟುವುದು ಸಾಯುವುದಕ್ಕಾಗಿಯೇ-ಎಂಬುದು ಸತ್ಯವಲ್ಲ. ಹುಟ್ಟುವುದು—ಸಾಯುವುದಕ್ಕಲ್ಲ; ಜೀವಿಸುವುದಕ್ಕಾಗಿ. ಈ ಲೋಕ—ಕಂಡು ದೂರ ಓಡಿಹೋಗಬೇಕಾದ ಭೂತವಲ್ಲ; ವಿದ್ವಜ್ಜನರಿಗೆ ಅತ್ಯಂತ ಪ್ರಿಯವಾದುದು ಈ ಲೋಕ. ಏಕೆಂದರೆ—ಇದು ಜೀವರ ಕರ್ಮ ಭೂಮಿ; ಆತ್ಮ-ವಿಕಾಸದ ಪ್ರಯೋಗ ಶಾಲೆ. ಅನಂತಜ್ಞಾನನೂ, ಅನಂತಸಾಮರ್ಥ್ಯನೂ ಆದ ಜಗತ್ಪಿತನ ಈ ರಚನೆ, ಯಾರಿಂದಲೂ ಗೆಲ್ಲಲಾಗದಂತಹುದು; ಯಾರೆಷ್ಟು ಜಯಿಸಿದರೂ ಜಯಿಸಬೇಕಾದುದು ಇನ್ನೂ ಉಳಿದೇ ಇರುತ್ತದೆ; ಭಗವಂತನ ಜಗತ್ತನ್ನು ಯಾವ ಜೀವ ತಾನೇ ಗೆಲ್ಲ ಬಲ್ಲ? ಅಂತೇ ಈ ಜಗತ್ತು ವಿದ್ವಾಂಸರಿಗೆ ಪ್ರಿಯವಾಗಿ ತೋರುತ್ತದೆ. ಸಂತೋಷವಿರುವುದು ನಿರಂತರ ಸಾಧನೆಯಲ್ಲಿ ತಾನೇ? ಆಲಸ್ಯವುಳ್ಳವರು ಬೇಕಾದರೆ ಜಗತ್ತಿಗೆ ಶಾಪ ಹಾಕುತ್ತಿರಲಿ; ಆದರೆ ನಿತ್ಯ ಜಾಗ್ರತರಾದ ದೇವಜನರು [**ಜಾಗ್ರತಿ ವೈ ದೇವಾಃ**], ಸದಾ ಸಾಧನಾರತರಾದ ವಿದ್ವಾಂಸರು ಈ ಜಗತ್ತನ್ನು ಅತ್ಯಂತ ಪ್ರಿಯವೆಂದೇ ತಿಳಿಯುತ್ತಾರೆ. ಹುಟ್ಟುವುದು ಅತ್ತು ಅತ್ತು, ಆದಷ್ಟು ಬೇಗ ಕಂತೆಯೊಗೆಯುವುದಕ್ಕಲ್ಲ; ನಗ ನಗುತ್ತಾ ದೀರ್ಘಾಯುವಾಗಿ ಬಾಳಲಿಕ್ಕಾಗಿ; ಸಂಪೂರ್ಣ ಜೀವನದ ಸವಿ ಕಂಡು, ಆತ್ಮ ಪರಿಪಕ್ವವಾದಮೇಲೆ, ದೇಹತ್ಯಾಗ ಮಾಡಬೇಕಾದ ಕಾಲ ಬಂದಾಗ ನಗುನಗುತ್ತಲೇ, ತೃಪ್ತಿಯಿಂದಲೇ ಪರಲೋಕಗಮನ ಮಾಡಲಿಕ್ಕಾಗಿ- ಸಾಯುವುದಕ್ಕಾಗಿ ಅಲ್ಲ; ಬಾಳುವುದಕ್ಕಾಗಿ. ನಮಗೆ ಸಾವಿನ ನೆನಪಿರಬೇಕು. ಬಾಳು ಇದ್ದಕ್ಕಿದ್ದಂತೆ ನಡುವಿನಲ್ಲೇ ಸಾವಿನ ಬಾಯಿಗೆ ತುತ್ತಾಗದಂತೆ ಎಚ್ಚರಿಕೆ ತಾಳುವುದಕ್ಕಾಗಿಯೇ ನಾವು ಸಾವನ್ನು ಗಮನದಲ್ಲಿಟ್ಟುಕೊಂಡಿರಬೇಕು. ನಾವು ಮತ್ತು ವಿದ್ವಜ್ಜನರು ನಮಗೆ ಬಾಳುವ ಪರಿ ತಿಳಿಸಲಿಕ್ಕಾಗಿಯೇ ಎಚ್ಚರ ಕೊಡುತ್ತಾರೆ.

ಆದರೆ—ಈ ಲೋಕ ಪ್ರಿಯವೆಂದು ಹೇಳಿ, ಸುಖವಾಗಿ ಬಾಳುವುದೇ ಗುರಿಯೆಂದರಿತು, ಮನಬಂದಂತೆ ವರ್ತಿಸಿದರೂ ನಾವು ಆ ಉದ್ದೇಶ್ಯವನ್ನು ಸಾಧಿಸಲು ಸಾಧ್ಯವಾಗಲಾರದು. ತನ್ನಂತೆಯೇ ಪರರಿಗೂ ಸುಖ ಬೇಕು—ಎಂಬ ಭಾವನೆ ಮರೆತು ಹೋದಲ್ಲಿ, ಕೆಟ್ಟ ಹೋರಾಟ ಆರಂಭವಾಗಿ, ಸುಖಕ್ಕೆ ಬದಲು ದುಃಖವೇ ಲಭಿಸುವ ಸಂಭವವಿರುತ್ತದೆ. ಆದುದರಿಂದ—ಉಚ್ಛೃಂಖಲ ವೃತ್ತಿಗೆ ಸಿಕ್ಕದಂತೆ ಜೀವನನ್ನು ತಡೆದು, ಆತ್ಮೋದ್ಧಾರಕವಾದ ನಿಯಮಗಳಿಗೆ ಅವನನ್ನು ಒಳಪಡಿಸುವ ತತ್ವವೇ ಧರ್ಮವಾಗಿರುತ್ತದೆ. "ತನ್ನಂತೆ ಪರರು" ಎಂಬ ಭಾವನೆಯನ್ನು ಋಗ್ವೇದ—"ಕಾಣಿಸದಿರುವ ಮತ್ತು ಕಾಣಿಸುತ್ತಿರುವ ಸಮಸ್ತ ಜೀವರೂ ಸುಖದಿಂದ, ತಿನ್ನುತ್ತಾ-ಉಣ್ಣುತ್ತಾ ಬಾಳಿರಿ"-ಎಂಬ ವಾಕ್ಯದಿಂದ ವ್ಯಕ್ತಪಡಿಸುತ್ತಲಿದೆ. ಈ ಭಾವನೆಯೇ ವಸ್ತುತಃ ಧರ್ಮದ ಅಡಿಗಲ್ಲು. ಈ ಭಾವನೆ ಇಲ್ಲದ ಕಡೆ, "ಯಾರಿದ್ದರೇನು, ಯಾರು ಸತ್ತರೇನು? ಯಾರುಂಡರೇನು, ಯಾರು ಹಸಿದಿದ್ದರೇನು? ಯಾರು ಅತ್ತರೇನು, ಯಾರು ನಕ್ಕರೇನು? ನನ್ನ ಹೊಟ್ಟೆಯಷ್ಟು ತುಂಬಿ, ನಾನು ನಲಿಯುತ್ತಿದ್ದರೆ-ಅಷ್ಟೇ ಸಾಕು" ಎಂಬ ಭಾವನೆ ಇರುವ ಕಡೆ ಧರ್ಮದ ನೆರಳೂ ಸಹ ಇರಲಾರದು.

ಈ ಭಾವನೆ ಹುಟ್ಟಬೇಕಾದರೆ—ನಾಲ್ಕು ಆವಶ್ಯಕವಾದ ಮೂಲಭೂತ ತತ್ತ್ವಗಳು

ಸದಾ ನೆನಪಿನಲ್ಲಿಟ್ಟೇ ಇರಬೇಕು. ಆ ನಾಲ್ಕು ತತ್ತ್ವಗಳನ್ನು ಋಗ್ವೇದ, "ದ್ಯೌಃ, ಪೃಥಿವೀ, ಸೋಮ, ಅದಿತಿ"-ಎಂಬ ನಾಲ್ಕು ಮಾತುಗಳಿಂದ ಬಣ್ಣಿಸುತ್ತಲಿದೆ. ದ್ಯೌಃ-ಎಂದರೆ, ನಿರ್ಮಲ ಜ್ಯೋತಿಃ ಸ್ವರೂಪನಾದ ಪರಮಾತ್ಮ; ಆವನು ಜೀವರೆಲ್ಲರಿಗೂ 'ಪಿತಾ'-ಎಂದರೆ ತಂದೆ. ಪೃಥಿವೀ-ಎಂದರೆ ಭೂಮಿ; ಆವಳು ಜೀವರೆಲ್ಲರಿಗೂ ತಾಯಿ. ಸೋಮ-ಎಂದರೆ ವಿವೇಕ; [ಸೋಮಃ ಸುನೋತೇಃ;- "ಹಿಂಡುವುದಾವುದೋ, ಅದೇ ಸೋಮ"-ನಿರುಕ್ತ] ವಿವೇಚನೆ ಮಾಡಿ ಸಾರ ತೆಗೆವ ಶಕ್ತಿಯೇ ಸೋಮ; ಅದು ಜೀವರೆಲ್ಲರಿಗೂ ಸೋದರ. ಅದಿತಿ-ಎಂದರೆ ಅಖಂಡತೆ. ಅಥವಾ ಸ್ವತಂತ್ರತೆ [ಅದಿತಿರದೀನಾ ದೇವಮಾತಾ. (ನಿರುಕ್ತ:-೪-೨೨)-ದೈನ್ಯವಿಲ್ಲದ, ವಿದ್ವಜ್ಜನರಿಗೆ ಮಾನ ನೀಡುವ ಗುಣವೇ ಅದಿತಿ.] ನಿಜವಾಗಿ ಜೀವನು ಜೀವನನ್ನು ಗೌರವಿಸುವುದೆಂದರೆ, ಜೀವನು ಜೀವನ ನಿಸರ್ಗಸಿದ್ಧವಾದ ಸ್ವಾತಂತ್ರ್ಯವನ್ನು ಒಪ್ಪಿಕೊಳ್ಳುವುದೇ ಸರಿ. ಅಂದರೆ ಅಖಂಡತೆ ಅಥವಾ ಸ್ವತಂತ್ರವೇ ಮಾನವರೆಲ್ಲರ ಸೋದರಿ. ಇಲ್ಲಿ ಉಪಯೋಗಿಸಿರುವ "ಪಿತಾ, ಮಾತಾ, ಭ್ರಾತಾ ಮತ್ತು ಸ್ವಸಾ" ಎಂಬ ನಾಲ್ಕು ಶಬ್ದಗಳೂ ಅತ್ಯಂತ ಅರ್ಥಗರ್ಭಿತವಾದುವೇ ಆಗಿವೆ. "ಪಾತೀತಿ ಪಿತಾ"-ಪಾಲಿಸುವವನೇ ಪಿತಾ; "ಮಾನಯತೀತಿ ಮಾತಾ"-ಗೌರವ ನೀಡುವವಳೇ ಮಾತಾ. "ಬಿಭರ್ತೀತಿ ಭ್ರಾತಾ" ಎತ್ತಿಹಿಡಿವವನೇ ಭ್ರಾತಾ; "ಸ್ವಯಂ ಸರತೀತಿ ಸ್ವಸಾ"-ಸ್ವತಃ ಹರಿದು ಬರುವವಳೇ-ಸ್ವಸಾ! ಎಂದರೆ-"ಸರ್ವಜೀವದ ಪಾಲಕನು ಪರಮಾತ್ಮ. ಎಲ್ಲರಿಗೂ ಗೌರವ ನೀಡುವವಳು ಪೃಥಿವೀ. ಎಲ್ಲರನ್ನೂ ಎತ್ತಿ ಹಿಡಿಯುವುದು ವಿವೇಕ; ಎಲ್ಲರೊಂದಿಗೂ ನಿಸರ್ಗಸಿದ್ಧವಾಗಿ ಹರಿದು ಬರುವುದು ಸ್ವಾತಂತ್ರ್ಯ; ಈ ನಾಲ್ಕು ತತ್ತ್ವಗಳ ಅನುಷ್ಠಾನವೇ ಧರ್ಮ. ಪರಮಾತ್ಮನು ಸರ್ವರಕ್ಷಕನೆಂದಮೇಲೆ-ತನ್ನ ಬಗ್ಗೆ ಅಹಂಕಾರ ಬೇಕಾಗಿಲ್ಲ. ಪೃಥಿವೀ ಎಲ್ಲರಿಗೂ ಗೌರವ ನೀಡುವವಳೆಂದಮೇಲೆ-ಪೃಥಿವಿಯಲ್ಲಿ ಹುಟ್ಟಿದವರೆಲ್ಲರಿಗೂ ಗೌರವ ಸಿಕ್ಕಲೇ ಬೇಕು! ವಿವೇಕ ಎಲ್ಲರನ್ನೂ ಎತ್ತಿಹಿಡಿಯುವುದೆಂದಮೇಲೆ, ಪ್ರತಿಯೊಬ್ಬರೂ ಅಂಧಶ್ರದ್ಧೆಗೆ ತಿಲಾಂಜಲಿಯಿತ್ತು, ವಿವೇಕದಿಂದ ತನ್ನ ಜೀವನವನ್ನು ಮೇಲ್ಮಟ್ಟಕ್ಕೇರಿಸಬೇಕು. ಸ್ವಾತಂತ್ರ್ಯ ಎಲ್ಲರ ಬಾಳಿಗೂ ಸ್ವತಃ ಹರಿದುಬರುವ ತತ್ತ್ವವೆಂದಮೇಲೆ, ಯಾರಿಗೂ ಯಾರನ್ನೂ ತುಳಿಯುವ, ಯಾರನ್ನೂ ಶೋಷಿಸುವ ಹಕ್ಕಿಲ್ಲ-ಎಂಬುದು ಸ್ಪಷ್ಟವಾಗಿಯೇ ಇದೆ. ಪರಮಾತ್ಮನ ಪಿತೃಭಾವ, ಪೃಥಿವಿಯ ಮಾತೃಭಾವ ವಿವೇಕದ ಭ್ರಾತೃಭಾವ ಮತ್ತು ಸ್ವಾತಂತ್ರ್ಯದ ಸ್ವಸೃಭಾವ, ಈ ನಾಲ್ಕು ದೃಢವಾದ ಸ್ತಂಭಗಳ ಮೇಲೆಯೇ ವೈದಿಕ ಧರ್ಮದ ಭವ್ಯ ಪ್ರಾಸಾದ ನಿರ್ಮಿತವಾಗಿದೆ. ಈ ಬಗೆಯ ಸಾರ್ವಭೌಮ ಧರ್ಮದ ಪ್ರಸಾರ ಮಾಡುವ ವೇದಗಳಲ್ಲಿ ಯಾವ ವಿಚಾರಶೀಲರಿಗೆ ತಾನೇ ಶ್ರದ್ಧೆಯಿರಲಿಕ್ಕಿಲ್ಲ? ಒಂದು ಸಣ್ಣ ಮಂತ್ರದಲ್ಲೇ ಧರ್ಮದ ಮೂಲತತ್ತ್ವಗಳನ್ನು ಇಷ್ಟು ಮನೋಹರವಾಗಿ ವರ್ಣಿಸಬಲ್ಲ ವೇದಗಳ ಸಂಪೂರ್ಣ ಜ್ಞಾನ ಪಡೆದ ಮಾನವನಿಗೆ ಇನ್ನೆಂತಹ ದಿವ್ಯಪ್ರಕಾಶ ಸಿಕ್ಕಬಹುದು?

ಆತ್ಮನನ್ನು ಎತ್ತಿ ಹಿಡಿಯುವ, ಪತನಕ್ಕೆ ಬೀಳದಂತೆ ರಕ್ಷಿಸುವ ಸದ್ಗುಣಗಳ ಸಮೂಹವನ್ನೇ ಧರ್ಮ-ಎಂದು ಕರೆಯುವುದು. **"ಧರತೀತಿ ಧರ್ಮಃ"**-"ಉದ್ಧರಿಸುವುದಾವುದೋ ಅದೇ ಧರ್ಮ" ಇಂತಹ ಆತ್ಮೋದ್ಧಾರಕವಾದ ಧರ್ಮವು ವೇದಗಳಲ್ಲಿ ವಿಶದವಾಗಿ ವರ್ಣಿತವಾಗಿದೆ. ಮುಂದಿನ ಲೇಖನಗಳಲ್ಲಿ, ಬೇರಾವ ವಿಷಯವನ್ನೂ ಚರ್ಚಿಸದೆ, ಕೇವಲ ವೇದೋಕ್ತ ಧರ್ಮದ ಆಕರ್ಷಕ ಸ್ವರೂಪವನ್ನೇ ಪ್ರಬಲವಾದ ಪ್ರಮಾಣಗಳನ್ನಿತ್ತು

ಪ್ರತಿಪಾದಿಸುವೆವು. ಆದರಿಂದ ವೇದಗಳ ಬಗೆಗಿರುವ-"ಕೇವಲ ವಿವಿಧ ಶಕ್ತಿಗಳ ಸ್ತುತಿಮಾತ್ರ ವೇದಗಳಲ್ಲಿರುವುದು. ಸಾಮಾನ್ಯ ಹಾಗೂ ವಿಶೇಷ ಧರ್ಮಗಳ ವರ್ಣನೆ ವೇದಗಳಲ್ಲಿಲ್ಲ."-ಎಂಬ ಭ್ರಾಂತಿ ತಾನಾಗಿಯೇ ದೂರವಾಗುವುದು. ಮತ್ತು ವೇದೋಕ್ತ ಧರ್ಮ, ಯಾವ ಮತ ಅಥವಾ ಸಂಪ್ರದಾಯವೂ ಆಗಿರದೆ, ಶುದ್ಧಧರ್ಮವೇ-ಆತ್ಮಧಾರಕ ಸಾಮರ್ಥ್ಯವೇ-ಆಗಿರುವುದರಿಂದ, ಅದು ಸಾರ್ವಭೌಮ ಹಾಗೂ ಸಾರ್ವಕಾಲಿಕ. "ಧರ್ಮ" ಎಂಬ ಶಬ್ದಕ್ಕೆ-"ಸಂಪ್ರದಾಯ" ಎಂಬ ಸಂಕುಚಿತಾರ್ಥ ಮಾಡಿ, "ನಾವು ತಿದ್ದುವುದು ಹೇಗೆ, ವಿಗ್ರಹಾರ್ಚನೆ ಮಾಡುವುದು ಹೇಗೆ? ನಾನಾ ಹಬ್ಬ ಹುಣ್ಣಿಮೆಗಳ ಆಚರಣೆ ಮಾಡುವುದು ಹೇಗೆ? ಇದನ್ನೆಲ್ಲಾ ವೇದಗಳಲ್ಲೆಲ್ಲಿ ಹೇಳಿದೆ?"-ಎಂದು ಹುಡುಕಲಾರಂಭಿಸಿದರೆ, ಕೊನೆಗೆ ಕೈಗೆ ಹತ್ತುವುದು ನಿರಾಶೆಯ ಬುತ್ತಿಯೊಂದೇ; ವೇದಗಳಲ್ಲಿರುವುದು ಪರಮ ವೈಜ್ಞಾನಿಕನಾದ ಸರ್ವಜ್ಞ ಪರಮಾತ್ಮನ ಶುದ್ಧ ವೈಜ್ಞಾನಿಕ ಸಾರ್ವಭೌಮ ಧರ್ಮದ ಗಂಭೀರ ವರ್ಣನೆಯೇ ಹೊರತು, ಮತ ಮತಾಂತರವಾದಿಗಳ ಸಾಂಪ್ರದಾಯಿಕ ಏಕತಂತ್ರ ಸಿದ್ಧಾಂತಗಳ ವರ್ಣನೆಯಲ್ಲ.

---

# ಪಾಶ್ಚಿಮಾತ್ಯ ವೇದ ಭಾಷ್ಯಕಾರರು

● ಪ್ರೊ| ಜ್ಯೇಷ್ಠವರ್ಮನ್

ವೇದವು ಸೂರ್ಯನಂತೆ ಸ್ವಯಂ ಪ್ರಕಾಶಮಾನವಾಗಿರುವಂತಹ ಒಂದು ಜ್ಞಾನ ಜ್ಯೋತಿಯಾಗಿದೆ. ಸೂರ್ಯನನ್ನು ತೋರಿಸಲು ಇತರ ದೀಪಗಳು ಅನಾವಶ್ಯಕ. ಇದೇ ರೀತಿಯಲ್ಲಿ ವೇದದ ಪರಿಚಯ ಮಾಡಿಕೊಡಲು, ಅಥವಾ ವೇದ ಮಂತ್ರಗಳ ಅರ್ಥವನ್ನು ಹೇಳಿಕೊಡಲು ಇತರ ಗ್ರಂಥಗಳ ಆವಶ್ಯಕತೆ ಇಲ್ಲ.[1] ಆದರೆ, ಸೂರ್ಯನನ್ನು ನೋಡಲು ಕೇವಲ ಕಣ್ಣಿದ್ದವನಿಗೆ ಮಾತ್ರ ಸಾಧ್ಯ. ಅಂತೆಯೇ, ವೇದ ಮಂತ್ರಾರ್ಥಗಳನ್ನು ಅರ್ಥ ಮಾಡಿಕೊಳ್ಳಲು ದೃಷ್ಟಿಯು ಬೇಕು. ಅದೇ ಋಷಿದೃಷ್ಟಿ. ಈ ಋಷಿದೃಷ್ಟಿಯು, ಬ್ರಹ್ಮಚರ್ಯದ ಪಾಲನೆ, ಸ್ವಾಧ್ಯಾಯ, ಚಿಂತನ, ಮನನ ಪರಿಶ್ರಮಗಳೆಂಬ ತಪಸ್ಸಿನ ಫಲ.

ಸೂಕ್ಷ್ಮ ತರ್ಕಶಕ್ತಿಯುಳ್ಳ ವೇದಜ್ಞ ವಿದ್ವಾಂಸರಿಗೆ ಮಾತ್ರ ವೇದವಿದ್ಯೆಯು ಲಭಿಸುತ್ತದೆ; ಬುದ್ಧಿಹೀನ ಮೂಢಜನರಿಗೆ, ವೇದಮಂತ್ರಗಳಿಂದ ಏನೂ ಲಾಭವಾಗದು; ಆದುದರಿಂದ ವೇದಮಂತ್ರಾರ್ಥ ನಿರ್ಣಯಕ್ಕಾಗಿ ಒಟ್ಟುಗೂಡುವಾಗ ಮೇಧಾವಿಗಳಾದ ವಿದ್ವಾಂಸರು ಈ ಅರ್ಹತೆ ಇಲ್ಲದ ಅಲ್ಪಬುದ್ಧಿಯ ಜನರನ್ನು ತಮ್ಮೊಂದಿಗೆ ಸೇರಲು ಬಿಡುವುದಿಲ್ಲ-ಎಂದು ವೇದವೇ ಹೇಳುತ್ತದೆ.[2] ಹಿಂದೆ ಋಷಿಗಳೇ ವೇದಮಂತ್ರಗಳ ಅರ್ಥಗಳನ್ನು ವಿವರಿಸಿ ಹೇಳುತ್ತಿದ್ದರು. ಈಗ ಋಷಿಗಳು ದುರ್ಲಭರಾಗಿದ್ದಾರೆ. ಇಂತಹ ಪರಿಸ್ಥಿತಿಯಲ್ಲಿ ತರ್ಕವೇ

---

ಟಿಪ್ಪಣಿ: 1) ಬ್ರಹ್ಮಸೂರ್ಯಸಮಜ್ಯೋತಿಃ ॥ ಯಜುರ್ವೇದ ॥

2) ಹೃದಾತಷ್ಟೇಷು ಮನಸೋ ಜವೇಷು ಯದ್ ಬ್ರಾಹ್ಮಣಾಃ ಸಂಯಜಂತೇ ಸಖಾಯಃ । ಅತ್ರಾಹ ತ್ವಂ ವಿಜಹುರ್ವೇದ್ಯಾಭಿರೋಹ ಬ್ರಾಹ್ಮಣೋ ವಿಚರಂತ್ಯು ತ್ವೇ ॥ ಋಗ್ವೇದ ೧೦-೭೧-೮ ॥

ಋಷಿಯೆಂದೂ, ಮಂತ್ರಾರ್ಥ ನಿರ್ಣಯಕ್ಕೆ ಅದೇ ಸಹಾಯಕವೆಂದೂ ವಿದ್ವಾಂಸರು ಹೇಳಿದ್ದಾರೆ. ಈ ತರ್ಕವು ಸತ್ಯಪ್ರಮಾಣ, ಪೂರ್ವಾಪರ ಪ್ರಕರಣಗಳ ಜ್ಞಾನ, ಬ್ರಾಹ್ಮಣ ಗ್ರಂಥಗಳು, ವೇದಾಂಗಗಳು, ಷಡ್ದರ್ಶನಗಳು ವೇದಗಳ ಭಿನ್ನಭಿನ್ನ ಶಾಖೆಗಳು—ಇವುಗಳ ಅಧ್ಯಯನ, ಉತ್ತಮ ವಿದ್ವಾಂಸರ ಉಪದೇಶ, ಶುದ್ಧವಾದ ಆತ್ಮ, ಮತ್ತು ಪರಮಾತ್ಮನ ಕೃಪೆ ಇತ್ಯಾದಿಗಳಿಂದ ಸಮನ್ವಿತವಾಗಿರಬೇಕೆಂದು ಆಚಾರ್ಯ ಯಾಸ್ಕರು ಹೇಳಿದ್ದಾರೆ. ಕೇವಲ ಶಾಸ್ತ್ರಜ್ಞಾನ ಅಥವಾ ಕೇವಲ ತರ್ಕದಿಂದ ಮಂತ್ರಾರ್ಥ ನಿರ್ಣಯ ಮಾಡಲಿಕ್ಕೆ ಸಾಧ್ಯವಿಲ್ಲ.[3] ಅಲ್ಪಬುದ್ಧಿಯ ಜನರನ್ನು ವೇದಮಂತ್ರಾರ್ಥ ನಿರ್ಣಯ ಮಾಡುವಲ್ಲಿ ದೂರವಿಡುವುದು ಯಾಕೆಂದರೆ, ಇವರು ಇತರರ ಸಮಯವನ್ನು ಹಾಳುಮಾಡುತ್ತಾರೆ, ತಮ್ಮ ಸಮಯವನ್ನೂ ಹಾಳುಮಾಡುತ್ತಾರೆ; ತರ್ಕದ ಹೆಸರಲ್ಲಿ ಕುತರ್ಕಮಾಡಿ ಜಗಳಕ್ಕಿಳಿಯುತ್ತಾರೆ. ಶುದ್ಧವಾದ ಆತ್ಮ ಮತ್ತು ಪರಮಾತ್ಮನ ಕೃಪೆಯ ಸಿದ್ಧಿಗೆ ಯೋಗಾಭ್ಯಾಸವು ಬೇಕು.

ಇನ್ನೊಂದು ವೇದಮಂತ್ರವು ಹೀಗನ್ನುತ್ತದೆ—ವೇದಮಂತ್ರಗಳ ಕೇಂದ್ರ ಬಿಂದು ಅವಿನಾಶಿಯೂ, ಸರ್ವರಕ್ಷಕನೂ, ಸರ್ವವ್ಯಾಪಕನೂ ಆದ ಪರಮಾತ್ಮನಾಗಿರುತ್ತಾನೆ; ಎಲ್ಲಾ ದೇವತೆಗಳೂ ಅವನ ಆಶ್ರಯದಲ್ಲಿಯೇ ಇವೆ; ಈ ರಹಸ್ಯವನ್ನು ತಿಳಿಯದ ವಿದ್ವಾಂಸನಿಗೆ ವೇದಮಂತ್ರಗಳಿಂದ ಏನೂ ಲಾಭವಾಗಲಾರದು.[4] ಎಂದರೆ, ಆಸ್ತಿಕತೆಯು ವೇದಮಂತ್ರಾರ್ಥ ದರ್ಶನಕ್ಕೆ ಬೇಕಾದ ಒಂದು ಮುಖ್ಯ ಆಧಾರ. ನಾಸ್ತಿಕರಿಗೆ ವೇದಗಳಿಂದ ಏನೂ ಪ್ರಯೋಜನವಿಲ್ಲ.

ಈ ರೀತಿ ಮೇಲೆ ಹೇಳಿದ ನಾನಾ ಪ್ರಕಾರದ ಯೋಗ್ಯತೆಗಳಿಂದ ಕೂಡಿದ ವೇದಜ್ಞ ವಿದ್ವಾಂಸರಿಗೆ ಮಾತ್ರ ಮನಪೂರ್ವಕವಾಗಿ ತನ್ನತನುವನ್ನು ಪತಿಗೆ ಸಮರ್ಪಣೆ ಮಾಡುವ ಪತಿಕಾಮಿನೀ ಸತಿಯಂತೆ, ವೇದವಿದ್ಯೆಯು ಲಭಿಸುತ್ತದೆ. ಅನ್ಯರಿಗೆ, ಮಂತ್ರಗಳನ್ನು ನೋಡಿಯೂ ನೋಡದಂತೆಯೇ, ಕೇಳಿಯೂ ಕೇಳದಂತೆಯೇ ಸರಿ.[5] ವೇದಮಂತ್ರಗಳ ಅರ್ಥ ರೂಪೀ ದುಗ್ಧಪಾನ ಮಾಡಬಲ್ಲ ವೇದಜ್ಞ ವಿದ್ವಾಂಸರೇ ಸಭೆಗಳಲ್ಲಿ ಮನ್ನಣೆಯನ್ನು ಪಡೆಯುತ್ತಾರೆ. ಇತರ ವೇದಪಾಠಿಗಳು ಹಾಲಿನ ಆಸೆಯಿಂದ ಕೃತಕ ದನದ ಹಿಂದೆ ಹಿಂದೆ ಓಡುವ ಮೂರ್ಖರಂತೆ ನಿಂದೆಗೊಳಗಾಗುತ್ತಾರೆ. ವೇದವಾಗ್ರೂಪ ವೃಕ್ಷದ ಪುಷ್ಪವಾಗಲೀ ಫಲ

---

3) ನಿರುಕ್ತ ೧೩.೧೨ ॥

ಮಹರ್ಷಿ ದಯಾನಂದ ಸರಸ್ವತೀ, ಋಗ್ವೇದಾದಿಭಾಷ್ಯಭೂಮಿಕಾ, ವೇದವಿಷಯ ವಿಚಾರ ಪುಟ ೮೨. ವೈದಿಕ ಯಂತ್ರಾಲಯ ಪ್ರಕಾಶನ.

4) ಋಚೋ ಅಕ್ಷರೇ ಪರಮೇ ವ್ಯೋಮನ್ಯಸ್ಮಿಂದೇವಾ ಅಧಿವಿಶ್ವೇ ನಿಷೇದುಃ । ಯಸ್ತನ್ನ ವೇದ ಕಿಮೃಚಾ ಕರಿಷ್ಯತಿ ಯ ಇತ್ತದ್ವಿದುಸ್ತ ಇಮೇ ಸಮಾಸತೇ ॥ಋಗ್ ೧-೧೬೪-೩೯ ॥

5) ಉತತ್ವಃ ಪಶ್ಯನ್ನ ದದರ್ಶ ವಾಚಮುತತ್ವಃ ಶೃಣ್ವನ್ನ ಶೃಣೋತ್ಯೇನಾಂ । ಉತೋತ್ವಸ್ಮೈ ತನ್ವಂ ವಿಸಸ್ರೇ ಜಾಯೇವ ಪತ್ಯ ಉಶತೀ ಸುವಾಸಾಃ ॥ ಋಗ್. ೧೦-೭೧-೪ ॥

ನಾಗಲೀ ಇವರ ಪಾಲಿಗೆ ಒದಗುವುದಿಲ್ಲ. ವೇದಜ್ಞ ವಿದ್ವಾಂಸರ ಮುಂದೆ ಮಾತನಾಡುವ ಯೋಗ್ಯತೆ ಇವರಿಗಿರುವುದಿಲ್ಲ.[6]

ವೇದಮಂತ್ರಗಳ ಅರ್ಥವನ್ನು ಪುಷ್ಪ-ಫಲವೆಂದು ಹೇಳುತ್ತಾರೆ. ಅಧಿಯಜ್ಞ ಅರ್ಥವು ಪುಷ್ಪವಾದರೆ, ಅಧಿದೈವ ಅರ್ಥವು ಫಲವೆಂದಾಗುತ್ತದೆ ಮತ್ತು ಅಧಿದೈವ ಅರ್ಥವು ಪುಷ್ಪವೆಂದಾದರೆ ಆಧ್ಯಾತ್ಮ ಅರ್ಥವು ಫಲವೆಂದಾಗುತ್ತದೆ.[7] ಫಲ ಮತ್ತು ಪುಷ್ಪಗಳು ಕಾರ್ಯಕಾರಣ ಸಂಬಂಧವನ್ನಿಟ್ಟುಕೊಂಡಿವೆ. ಪುಷ್ಪಗಳಿಂದಾಗಿ ಫಲಗಳಾಗುತ್ತವೆ. ಆದುದರಿಂದ ಪ್ರಥಮ ಪುಷ್ಪದರ್ಶನ, ಮತ್ತೆ ಫಲದರ್ಶನ. ವೇದಾರ್ಥಗಳ ಬಗ್ಗೆಯೂ ಇದೇ ರೀತಿಯೆಂದು ತಿಳಿದುಕೊಳ್ಳಬೇಕು. ಅಧಿಯಜ್ಞ ಅರ್ಥವು ಸ್ಥೂಲ ಅರ್ಥವಾಗಿದೆ. ಅಧಿದೈವ ಅರ್ಥವು ಅದಕ್ಕಿಂತ ಸೂಕ್ಷ್ಮವಾಗಿದೆ. ಆಧ್ಯಾತ್ಮ ಅರ್ಥವು ಅಧಿದೈವ ಅರ್ಥಕ್ಕಿಂತಲೂ ಅಧಿಕ ಸೂಕ್ಷ್ಮವಾಗಿದೆ, ಆದುದರಿಂದ ವಿದ್ವಾಂಸರು ಮೊದಲು ಅಧಿಯಜ್ಞ ಅರ್ಥವನ್ನು ಗ್ರಹಿಸುವುದರಲ್ಲಿ ಸಮರ್ಥರಾಗುತ್ತಾರೆ. ಈ ಅಧಿಯಜ್ಞ ಅರ್ಥದ ಸಹಾಯತೆಯಿಂದ ಮುಂದೆ ಅವರು ಅಧಿದೈವ ಅರ್ಥವನ್ನು ತಿಳಿದುಕೊಳ್ಳಲು ಸಮರ್ಥರಾಗುತ್ತಾರೆ. ಅಧಿದೈವ ಅರ್ಥವನ್ನು ತಿಳಿದುಕೊಂಡಮೇಲೆ, ಆಧ್ಯಾತ್ಮ ಅರ್ಥವನ್ನು ತಿಳಿದುಕೊಳ್ಳಲು ಸುಲಭವಾಗುತ್ತದೆ.

ಇದರ ತಾತ್ಪರ್ಯವೇನೆಂದರೆ, ವೇದಮಂತ್ರಗಳು ಅಧಿಯಜ್ಞ, ಅಧಿದೈವ ಮತ್ತು ಆಧ್ಯಾತ್ಮಗಳೆಂಬ ಮೂರುಪ್ರಕಾರದ ಅರ್ಥಗಳನ್ನು ಒಳಗೊಂಡಿವೆ. ಆದುದರಿಂದ ವೇದಗಳಲ್ಲಿ ಮುಖ್ಯವಾಗಿ ಮೂರು ವಿಷಯಗಳಿವೆಯೆಂದು ಹೇಳಬಹುದು. ಇಷ್ಟಲ್ಲದೆ, ಈ ಮೂರು ವಿಷಯಗಳು ಒಂದಕ್ಕೊಂದು ಪೂರ್ಣವಾಗಿ ಭಿನ್ನಭಿನ್ನವಾಗಿಲ್ಲ. ಇವು ಒಂದಕ್ಕೊಂದು ಪೂರಕವಾಗಿವೆ ಅಥವಾ ಒಂದನ್ನೊಂದು ಹೊಂದಿಕೊಂಡಿವೆ.

ಅಧಿಯಜ್ಞ ಅರ್ಥವೆಂದರೆ, ಕೆಲವರು ಕೇವಲ ಅಗ್ನಿಹೋತ್ರಾದಿ ದ್ರವ್ಯಯಜ್ಞಗಳೆಂದು ಹೇಳುತ್ತಾರೆ. ದೇವತೆಗಳಿಗೆ ಅಗ್ನಿಯ ಮೂಲಕ ಸೋಮರಸ ಇತ್ಯಾದಿಗಳ ಆಹುತಿಯನ್ನು ಕೊಟ್ಟು, ಅವುಗಳನ್ನು ಆಹ್ವಾನಿಸುವುದೇ ಯಜ್ಞದ ಮುಖ್ಯಕಾರ್ಯಗಳೆಂದು ಇವರ ನಂಬಿಕೆ. ಇದು ಸರಿಯಲ್ಲ. ಯಜ್ಞವೆಂದರೆ ಶ್ರೇಷ್ಠತಮಕರ್ಮ. ಮಾನವ ಜೀವನವನ್ನು ಸುಖಮಯವನ್ನಾಗಿ ಮಾಡಲು ನಿಯಮಪೂರ್ವಕವಾಗಿ ಕೈಗೊಳ್ಳುವ ಎಲ್ಲಾ ಶ್ರೇಷ್ಠಕಾರ್ಯಗಳು ಯಜ್ಞವೆಂದೇ ವರ್ಣಿಸುತ್ತವೆ. ಜಲವಾಯುಗಳ ಶುದ್ಧಿಗೆ ಮಾಡುವ ದ್ರವ್ಯಯಜ್ಞಗಳು ಯಜ್ಞವೆಂಬುದಕ್ಕೆ ಸಂದೇಹವಿಲ್ಲ ಆದರೆ, ಜ್ಞಾನ–ವಿಜ್ಞಾನಗಳ ಉನ್ನತಿ, ಕಲಾಯಂತ್ರಗಳ ನಿರ್ಮಾಣ, ನೌವಿಮಾನಾದಿ ಯಾನಗಳ ರಚನೆ, ಶಿಲ್ಪಕಲೆಗಳ ಪ್ರಚಾರ–ಇವೆಲ್ಲಾ ಯಜ್ಞಗಳೆಂದೇ ಎಣಿಸಿಕೊಂಡಿವೆ. ಯಾಕೆಂದರೆ, ಇವುಗಳಿಂದ ಎಲ್ಲಾ ಪ್ರಾಣಿಗಳಿಗೂ ಉಪಕಾರವಾಗುತ್ತವೆ. ಇದೇ ರೀತಿ ಅಧಿದೈವ ಅರ್ಥದ ಬಗ್ಗೆಯೂ ಜನರಲ್ಲಿ ತಪ್ಪು ಅಭಿಪ್ರಾಯಗಳಿವೆ. ದೇವತೆಗಳೆಂದರೆ, ಸ್ವರ್ಗವೆಂಬ ಯಾವುದೇ ಒಂದು ಮೇಲಿನ ಲೋಕ

---

6) ಉತತ್ವಂ ಸಖ್ಯೇ ಸ್ಥಿರಪೀತಮಾಹುರ್ನೈನಂ ಹಿನ್ವಂತಿ ವಾಜಿನೇಷು । ಅಧೇನ್ವಾ ಚರತಿ ಮಾಯಯೈವ ವಾಚಂ ಶುಶ್ರುವಾಂ ಅಫಲಾಮಪುಷ್ಪಾಂ ॥ ಋ.ಗ್. ೧೦-೭೧-೫ ॥

7) ಅರ್ಥಂ ವಾಚಃ ಪುಷ್ಪ ಫಲಮಾಹ । ಯಜ್ಞದೈವತೇ ಪುಷ್ಪಫಲೇ ದೇವತಾಧ್ಯಾತ್ಮೇವಾ॥ ನಿರುಕ್ತ ೧-೧೮ ॥

ವಿಶೇಷದಲ್ಲಿರುವ ಮಾನವರಂತಹ ಆಕೃತಿ, ಮತ್ತು ಗುಣ-ಕರ್ಮ-ಸ್ವಭಾವಗಳುಳ್ಳ, ಅತಿಮಾನವ ಶಕ್ತಿಗಳಿಂದ ಕೂಡಿದ ಮರಣ ಧರ್ಮರಹಿತ ಜೀವಿಗಳೆಂದು ಕೆಲವರು ಹೇಳಿದ್ದಾರೆ. ಇದು ವೇದಗಳಿಗೆ ವಿರುದ್ಧವಾದ ವಿಚಾರ. ವೇದಗಳಲ್ಲಿ ವಾಯು ಆದಿ ಆಕಾಶೀಯ ಪದಾರ್ಥಗಳನ್ನೆಲ್ಲಾ ದೇವತೆಗಳೆಂದು ಹೇಳಲಾಗಿದೆ; ಸೂರ್ಯ ಚಂದ್ರಮಾದಿ ಪ್ರಕಾಶ ನೀಡುವ ಪದಾರ್ಥಗಳನ್ನೂ ದೇವತೆಗಳೆಂದೇ ವರ್ಣಿಸಲಾಗಿದೆ. ಆದುದರಿಂದ ಪದಾರ್ಥವಿಜ್ಞಾನಕ್ಕೆ ಸಂಬಂಧಪಟ್ಟ ವಿಷಯಗಳೆಲ್ಲವೂ ಅಧಿದೈವ ವಿಷಯಗಳಾಗಿವೆ. ಇದರಿಂದ ಸೃಷ್ಟಿವಿದ್ಯೆಯ ಜ್ಞಾನವು ಲಭಿಸುತ್ತದೆ. ಇನ್ನು ಅಧ್ಯಾತ್ಮ ಅರ್ಥವೆಂದರೆ, ಪರಮಾತ್ಮ, ಜೀವಾತ್ಮ, ಇತ್ಯಾದಿಗಳಿಗೆ ಸಂಬಂಧಿಸಿದ ವಿಷಯ. ಈ ರೀತಿಯ ಅರ್ಥಪ್ರಕ್ರಿಯೆಗಳು ಲೌಕಿಕ ಭಾಷೆಗಳಲ್ಲಿ ಸಂಭವವಿಲ್ಲ. ಯಾಕೆಂದರೆ, ಲೌಕಿಕಭಾಷೆಗಳಲ್ಲಿ ಶಬ್ದಗಳು ರೂಢಾರ್ಥಗಳಲ್ಲಿ ಪ್ರಯುಕ್ತವಾಗುತ್ತವೆ. ವೈದಿಕ ಶಬ್ದಗಳು ಯೌಗಿಕ ಅರ್ಥಗಳಿಂದ ಕೂಡಿವೆ. ಎಂತಲೇ, ಮೇಲೆ ಹೇಳಿದ ತ್ರಿವಿಧ ಪ್ರಕ್ರಿಯೆಗಳು ಸಂಭವವಾಗಿವೆ. ಈ ಎಲ್ಲಾ ರಹಸ್ಯಗಳನ್ನು ತಿಳಿಯದೆ ವೇದಮಂತ್ರಾರ್ಥಕ್ಕೆ ಕೈಹಾಕುವುದು ದುಃಸಾಹಸವೇ ಸರಿ.

ಉದಾಹರಣೆಗಾಗಿ "ಅಗ್ನಿಮೀಳೇ ಪುರೋಹಿತಂ........" ಎಂಬ ಮಂತ್ರವನ್ನು ನೋಡುವ. ಇದು ಋಗ್ವೇದದ ಪ್ರಥಮ ಮಂತ್ರವಾಗಿದೆ ಇದನ್ನೀಗ ಅಧಿಯಜ್ಞ ಅರ್ಥದ ದೃಷ್ಟಿಯಲ್ಲಿ ನೋಡಿದರೆ, ಅಗ್ನಿಯೆಂದರೆ, ಬೆಂಕಿ, ಅಗ್ನಿವಿದ್ಯೆ ಅಥವಾ ಅಶ್ವವಿದ್ಯೆಯೆಂದು ಕೊಳ್ಳುವ ರಥವಿಮಾನಾದಿ ಯಾನಗಳನ್ನು ರಚಿಸುವ ವಿದ್ಯೆ, ಕಲಾಯಂತ್ರ ಅಥವಾ ಶಿಲ್ಪವಿದ್ಯೆ, ವಿದ್ವಾಂಸ, ನಾಯಕ ಎಂಬಿತ್ಯಾದಿ ಅರ್ಥಗಳಾಗುತ್ತವೆ. ಸ್ತುತಿಯ ಮೂಲಕ ಇಂತಹ ಅಗ್ನಿಯ ವರ್ಣನೆಯು ಇಲ್ಲಿದೆ. ಮುಂದುವರಿದು, ಅಧಿದೈವ ಅರ್ಥಕ್ಕೆ ಹೋದಾಗ, ಅಲ್ಲಿ ಅಗ್ನಿಯೆಂದರೆ, ವಿದ್ಯುತ್ ಮತ್ತು ಸೂರ್ಯ ಎಂದು ಅರ್ಥವಾಗುತ್ತದೆ. ಬೆಂಕಿ, ವಿದ್ಯುತ್ ಮತ್ತು ಸೂರ್ಯ ಇವು ಮೂರೂ ಒಂದೇ ಅಗ್ನಿಯ ಬೇರೆ ಬೇರೆ ರೂಪಗಳೆನ್ನುತ್ತಾರೆ. ಇನ್ನು ಈ ಪ್ರತಿಯೊಂದು ವಿಧದ ಅಗ್ನಿಯಲ್ಲಿಯೂ ಅನೇಕ ಪ್ರಭೇದಗಳಿವೆ. ಒಟ್ಟಿಗೆ ನಲ್ವತ್ತೈದು ಇಂತಹ ಪ್ರಭೇದಗಳಿವೆಯೆಂದು ಹೇಳುತ್ತಾರೆ. ಇವುಗಳಿಂದ ಉಪಕಾರವನ್ನು ಪಡೆಯಬೇಕೆಂದು ಈ ಮಂತ್ರದ ಆಶಯವಾಗಿದೆ. ಪುನಃ ಅಧ್ಯಾತ್ಮ ದೃಷ್ಟಿಯಿಂದ ನೋಡಿದರೆ, ಇದೇ ಅಗ್ನಿಶಬ್ದಕ್ಕೆ 'ಪರಮಾತ್ಮ' ಎಂಬ ಅರ್ಥವೂ ಪ್ರಸಿದ್ಧವಾಗಿದೆ. ಆದುದರಿಂದ, ಈ ಮಂತ್ರದಲ್ಲಿ ಪರಮಾತ್ಮನ ಉಪಾಸನೆಗೆ ಪ್ರೇರಣೆ ಇದೆಯೆಂದು ಗೊತ್ತಾಗುತ್ತದೆ. ಈ ಮಂತ್ರದಲ್ಲಿ ಬರುವ ಅಗ್ನಿಯ ವಿಶೇಷಣಗಳೆಲ್ಲಾ ಮೂರು ವಿಧದ ಪ್ರಕ್ರಿಯೆಗಳಲ್ಲಿ ಅತ್ಯಂತ ಸಮರ್ಪಕವಾಗಿ ಪ್ರಯುಕ್ತವಾಗಿರುವುದನ್ನು ನಾವು ಕಾಣಬಹುದು. ವೇದೋತ್ಪತ್ತಿಯ ಕಾಲದಿಂದಲೂ ಇದೇ ರೀತಿಯ ವೇದಾರ್ಥ ಪ್ರಕ್ರಿಯೆಗಳು ಬಳಕೆಯಲ್ಲಿದ್ದುವು. ಈ ದೃಷ್ಟಿಯಿಂದ ನೋಡಿದರೆ ಮಾತ್ರ ವೇದಗಳು ಸರ್ವ ಸತ್ಯವಿದ್ಯೆಗಳು, ಎಲ್ಲಾ ಜ್ಞಾನವಿಜ್ಞಾನಗಳ ಪುಸ್ತಕಗಳೆಂದು ಗೊತ್ತಾಗಬಹುದಲ್ಲವೆ, ಈ ಮಂತ್ರಾರ್ಥ ರಹಸ್ಯವನ್ನರಿಯದವರಿಗೆ, ಮೇಲಿನ ಮಂತ್ರದಲ್ಲಿ ಬೆಂಕಿಯಂತಹ ಜಡವಸ್ತುವಿನ ಪೂಜೆ ಮಾಡುವ, ಅವಿಕಸಿತ ಬುದ್ಧಿಯ ಜನರ ಕಲ್ಪನೆಯಾಗುತ್ತದೆ.

ಇಂತಹ ಅದ್ಭುತವಾದ ಅರ್ಥಪ್ರಕ್ರಿಯೆಗಳ ಪರಂಪರೆಯು ಮಹರ್ಷಿ ಸ್ವಾಮಿ ದಯಾನಂದ ಸರಸ್ವತಿಯವರ ಕಾಲದಲ್ಲಿ ನಷ್ಟವಾಗಿಹೋಗಿತ್ತು. ಅದು ಯಾವಾಗ ನಷ್ಟವಾಗಿ

ತ್ತೆಂದು ಹೇಳುವುದು ಕಷ್ಟ. ಆದರೆ, ಗೌತಮ ಬುದ್ಧನ ಕಾಲದಲ್ಲಿಯೂ ಇಂತಹ ವೇದಾರ್ಥ ಪ್ರಕ್ರಿಯೆಗಳ ಪರಂಪರೆಯು ಪ್ರಚಾರದಲ್ಲಿದ್ದಿಲ್ಲ. ಆದುದರಿಂದಲೇ ಯಜ್ಞಗಳಲ್ಲಿ ಪಶು ಹಿಂಸೆ, ಅಶ್ಲೀಲತೆ, ಜಡದೇವತಾಪೂಜೆ, ಇತ್ಯಾದಿಗಳ ಪ್ರಚಾರವಾಗಿತ್ತು. ಆಚಾರ್ಯ ಸಾಯಣ ಮಹೀಧರಾದಿ ಭಾಷ್ಯಕಾರರು ಇದೇ ಅವೈದಿಕ ಪರಂಪರೆಯಲ್ಲಿ ಬೆಳೆದವರು. ಆದು ದರಿಂದ ಇವರ ಭಾಷ್ಯಗಳನ್ನು ಓದಿದಾಗ ವೇದಮಂತ್ರಗಳಲ್ಲಿ ತರ್ಕ ಸಂಗತವಾದ, ಜ್ಞಾನ-ವಿಜ್ಞಾನಗಳಿಗೆ ಸಂಬಂಧಪಟ್ಟ ಯಾವ ಮಾತುಗಳೂ ನಮಗೆ ಕಂಡುಬರುವುದಿಲ್ಲ. ಕಳೆದ ಹತ್ತೊಂಬತ್ತನೆಯ ಶತಮಾನದಲ್ಲಿ ಯೂರೋಪಿನಲ್ಲಿ ವೇದಗಳ ಅಧ್ಯಯನವು ಪ್ರಾರಂಭ ವಾಯಿತು. ಆಗ ಅಲ್ಲಿಯ ವಿದ್ವಾಂಸರಿಗೆ ಇಂತಹ ಅವೈದಿಕ ಅರ್ಥ ಪರಂಪರೆಯೇ ಕೈ ಸೇರಿತು. ಆದುದರಿಂದ ವೇದಗಳ ಸುದೀರ್ಘಕಾಲ ಅಧ್ಯಯನದಿಂದ, ಪಾಶ್ಚಾತ್ಯ ವಿದ್ವಾಂಸ ರಿಗೆ ಏನೂ ಲಾಭವಾಗಲಿಲ್ಲ. ಹಾಲಿನ ಆಸೆಯಿಂದ ಕೃತಕ ಗೋವಿನ ಹಿಂದೆ ಹೋದ ಮೂರ್ಖರಂತೆ, ಅವರ ದೆಸೆಯಾಯಿತು. ವೇದಮಂತ್ರಗಳನ್ನು ಅವರು ನೋಡಿದರು, ಕೇಳಿ ದರು. ಆದರೆ, ಜೀವನದಲ್ಲಿ ಉಪಯುಕ್ತವಾಗುವಂತಹ ಯಾವ ಮಾತುಗಳೂ ಅಲ್ಲಿ-ಅವರಿಗೆ ಕಂಡುಬರಲಿಲ್ಲ, ಕೇಳಿಬರಲಿಲ್ಲ. ಆದುದರಿಂದ ಕೋಲ್ಬ್ರೂಕ್ ಮಹೋದಯರು ವೇದಗ ಳನ್ನು ಓದುವುದರಿಂದ ಏನೂ ಪ್ರಯೋಜನವಿಲ್ಲ, ಮತ್ತು ಅವುಗಳನ್ನು ಅನುವಾದ ಮಾಡಲು ಶ್ರಮಪಡುವುದು ನಿಜವಾಗಿಯೂ ವ್ಯರ್ಥವೆಂದು ಹೇಳಿದರು.[8] ವೇದವಾಗ್ರೂಪೀ ವೃಕ್ಷ ದಲ್ಲಿ ಪುಷ್ಪವನ್ನಾಗಲೀ ಫಲವನ್ನಾಗಲೀ ಕಾಣುವ ಸೌಭಾಗ್ಯ, ಯುರೋಪಿನ ಜನರಿಗೆ ಮೊತ್ತ ಮೊದಲು ವೇದಗಳ ಪರಿಚಯ ಮಾಡಿಕೊಟ್ಟ ಈ ಕೋಲ್ಬ್ರೂಕ್ ಮಹೋದಯರಿಗಿರಲಿಲ್ಲ. ಇದು ಯಾಕೆ ಹೀಗಾಯಿತು, ಎಂಬುದಕ್ಕೆ ಕಾರಣ ಓದುಗರಿಗೆ ಈಗಲೇ ಸ್ಪಷ್ಟವಾಗಿರಬೇಕು.

ಹತ್ತೊಂಬತ್ತನೆಯ ಶತಮಾನದಲ್ಲಿ ಭಾರತವು ಪರಾಧೀನವಾಗಿತ್ತು. ದಾರಿದ್ರ್ಯ, ಅಂಧವಿಶ್ವಾಸ, ಕಾಳುರೂಢಿ, ಮೂರ್ತಿ ಪೂಜೆಯೇ ಮೊದಲಾದ ದುರಾಚಾರಗಳಿಗೆ ಆಗ ಭಾರತೀಯರು ಒಳಗಾಗಿದ್ದರು. ಇವರ ಈ ಹೀನ ಮತ್ತು ದೀನಾವಸ್ಥೆಯನ್ನು ಕಂಡು, ಒಂದು ಕಾಲದಲ್ಲಿ ಇವರ ಪೂರ್ವಜರು ವಿಶ್ವದಲ್ಲಿಯೇ ಅತಿಶ್ರೇಷ್ಠ ಮತ್ತು ಅತಿ ಸಮೃದ್ಧ ಜನರಾಗಿದ್ದ ರೆಂಬ ಮಾತನ್ನು ಕಲ್ಪನೆ ಮಾಡುವುದಕ್ಕೂ ಸಾಧ್ಯವಿಲ್ಲವಾಗಿತ್ತು. ಆದುದರಿಂದ ಯುರೋಪಿನ ಜನರು ತಮ್ಮನ್ನು ತಾವೇ ಭಾರತೀಯ ಪ್ರಾಚೀನ ಋಷಿಗಳಿಗಿಂತಲೂ ಅಧಿಕ ಮೇಧಾವಿ ಗಳೆಂದು ಭಾವಿಸಿಕೊಂಡರು. ಹೀಗಾಗಿ ಶ್ರೀ ಅರವಿಂದ ಘೋಷರ ತಥಾ ಮಹರ್ಷಿ ದಯಾ ನಂದರ ಆಧ್ಯಾತ್ಮ ಅರ್ಥಪ್ರಕ್ರಿಯೆಗಳನ್ನು ಲೂಯಿ ರಿನೋ, ಮೇಕ್ಸ್‌ಮುಲ್ಲರ್ ಮೊದಲಾದ ವರು ಅಸ್ವೀಕಾರ ಮಾಡಿದರು.[9]

---

8) What the Vedas contain could hardly reward the labour of the reader, much less that of the translator—H. T. Colebrooke, Asiatic Researches VIII-1805. p. 476.

9) "We may reject the psychical explanation, which occasionally appears in native exegesis and which Aurobindo tried to revive. According to this theory the Veda is a Vast piece of symbolism representing the passions of the soul, and its striving

ಭೌತಿಕ ವಿಜ್ಞಾನದ ಯುಗವು ಆಗ ಯುರೋಪಿನಲ್ಲಿ ಆರಂಭವಾಗಿತ್ತು. ಇದು ವಿಶ್ವಕ್ಕೆ ಯುರೋಪಿನ ಕೊಡುಗೆ. ಹೀಗಾಗಿ ಯುರೋಪಿನ ಜನರು ಭಾರತೀಯರನ್ನು ಅಸಭ್ಯರು, ಹಿಂದುಳಿದವರು ಎಂದು ಭಾವಿಸಿದರು. ಅದೇ ಸಮಯದಲ್ಲಿ ಯುರೋಪಿನಲ್ಲಿ ವಿಕಾಸವಾದದ ಉದಯ ಮತ್ತು ಪ್ರಚಾರವಾಯಿತು. ಇದರ ಪ್ರಭಾವಕ್ಕೆ ಒಳಗಾಗಿ, ಜನರು ತಮ್ಮನ್ನು ತಾವೇ ಪ್ರಾಚೀನ ಕಾಲದ ಜನರಿಗಿಂತ ಹೆಚ್ಚು ಸಭ್ಯರು, ಹೆಚ್ಚು ಬುದ್ಧಿವಂತರು ಎಂದು ತಿಳಿದುಕೊಂಡರು. ಆದುದರಿಂದ ಅತೀಂದ್ರಿಯ ಜ್ಞಾನದ ಕೇಂದ್ರ, ಹಾಗೂ ಆಧ್ಯಾತ್ಮವಿದ್ಯೆಯ ಭಂಡಾರವೆನಿಸಿದ ಪ್ರಾಚೀನ ಋಷಿಗಳ ಯೋಗ್ಯತೆ ಮತ್ತು ಅವರ ಸಾಮರ್ಥ್ಯವನ್ನು ಇವರಿಗೆ ಕಲ್ಪನೆಮಾಡಲಿಕ್ಕೂ ಸಾಧ್ಯವಾಗಲಿಲ್ಲ. ಇದು ಕೂಡ, ವೇದಗಳನ್ನು ಅರ್ಥಮಾಡಿಕೊಳ್ಳುವುದಕ್ಕೆ ಅಡ್ಡಿಯಾಯಿತು.

ಇಷ್ಟಲ್ಲದೆ, ಆಗಲೇ ತಾನೇ ಜನ್ಮವೆತ್ತಿದ್ದ ಭಾಷಾವಿಜ್ಞಾನದ ಪ್ರಚಾರವೂ ಪಾಶ್ಚಾತ್ಯರ ಮಾನಸಿಕ ಸಂತುಲತೆಯನ್ನು ಕೆಡಿಸಿತು. ವೇದಗಳನ್ನು ಅರ್ಥಮಾಡಿಕೊಳ್ಳಬೇಕಾದರೆ, ನಿರುಕ್ತ ಅಲ್ಲ, ಯುರೋಪಿನ ಭಾಷಾವಿಜ್ಞಾನದ ಸಹಾಯತೆಯು ಅತ್ಯಗತ್ಯವೆಂದು ಇವರು ಹೇಳಿದರು. ಕೆಲವರಂತೂ ಭಾರತೀಯರಿಗೆ ವೇದಗಳನ್ನು ಸರಿಯಾದ ರೀತಿಯಲ್ಲಿ ಅರ್ಥಮಾಡಿಕೊಳ್ಳಲು ಬೇಕಾದ ಯೋಗ್ಯತೆಯೇ ಇಲ್ಲವೆಂದು ಹೇಳಿದ್ದಾರೆ.[10]

ಪ್ರಾಗೈತಿಹಾಸಿಕ ಜನರು ಮತ್ತು ಕಾಡುಜನರ ಬಗ್ಗೆ ಯುರೋಪಿನ ಜನರಲ್ಲಿ

---

after higher spiritual planes; thus the Veda–we are told, ceases to be a barbarous and unintelligible hymnary. I fear that it also ceases to be a document of pre-history''. (Religion of Ancient India by L. Renou).

''The historical importance of the Veda can hardly be exaggerated, but its intrinsic merit and particularly, the beauty or elevation of its sentiments have by many been rated for too high. Large numbers of the Vedic hymns are childish, in the extreme, tidious, low, Common place.'' (Max Muller Chips from a German Workshop. Longman Green and Co. London. 1867. vol. I. page 27).

10) ''Meaning of the Vedic hymns could be better understood by the linguistic which, was formed by the German scholars than the Nirukta.'' R Von Roth.

''The principles of the German school are the only ones which can ever guide us to a true understanding of Veda.'' A. M. Whitney.

''The erudition of the Indian Commentators could not hold the key to the Vedas; because they do not have the required untramalled Judgement and the capacity to understand historical development.'' Herman Oldenberg.

ಒಂದು ದೊಡ್ಡ ಭ್ರಾಂತಿಯು ಹರಡಿದೆ. ಇವೆರಡೂ ಒಂದೇ ಎಂದು ಇವರ ಅಭಿಪ್ರಾಯ.[11] ಇದು ಸರಿಯಲ್ಲ. ಯಾಕೆಂದರೆ, ಇಪ್ಪತ್ತನೆಯ ಶತಮಾನದಲ್ಲಿಯೂ ಕಾಡುಜನರಿದ್ದಾರೆ. ಇವರು ಪ್ರಾಗೈತಿಹಾಸಿಕ ಜನರಲ್ಲ. ಇದೇ ರೀತಿ ಪ್ರಾಗೈತಿಹಾಸಿಕ ಜನರನ್ನು ಕಾಡುಜನರೆಂದು ತಿಳಿದುಕೊಳ್ಳುವುದು ತಪ್ಪು. ಈ ತಪ್ಪು ತಿಳುವಳಿಕೆಯಿಂದಾಗಿಯೂ ಯುರೋಪಿನ ವಿದ್ವಾಂಸರಿಗೆ ವೈದಿಕ ಕಾಲದ ಜನರನ್ನು, ಅಥವಾ ವೈದಿಕ ಸಭ್ಯತೆಯನ್ನು ಅರಿತುಕೊಳ್ಳಲು ಸಾಧ್ಯವಾಗಲಿಲ್ಲ.

ಆಧುನಿಕ ಪಾಶ್ಚಾತ್ಯ ವೇದಭಾಷ್ಯಕಾರರ ಕುರಿತಾಗಿ ತಿಳಿದುಕೊಳ್ಳಬೇಕಾದಂತಹ ಇನ್ನೊಂದು ಮುಖ್ಯ ಮಾತೇನೆಂದರೆ, ವೇದಗಳ ಬಗ್ಗೆ ಅವರ ದ್ವೇಷ ಮತ್ತು ಬೈಬಲಿನ ಪ್ರಚಾರದ ಉದ್ದೇಶ. ಮೇಕ್ಸ್‌ಮುಲ್ಲರ್ ಮಹೋದಯರು ಬೈಬಲಿನ ಮೇಲೆ ಅಂಧಶ್ರದ್ಧೆ ಇದ್ದವರು; ಭಾರತೀಯ ಸಂಸ್ಕೃತಿಯನ್ನು ನಾಶಪಡಿಸಬೇಕೆಂದು ಬಯಸಿದವರು. ತನ್ನ ಮಗನಿಗೆ ಬರೆದ ಒಂದು ಪತ್ರದಲ್ಲಿ ಅವರು ಸ್ಪಷ್ಟವಾಗಿ ವಿಶ್ವದ ಎಲ್ಲಾ ಧಾರ್ಮಿಕ ಗ್ರಂಥಗಳಲ್ಲಿ ಬೈಬಲ್ ಸರ್ವಶ್ರೇಷ್ಠವಾದುದೆಂದು ಹೇಳಿದ್ದಾರೆ. ಈ ಬೈಬಲಿನಲ್ಲಿ ಒಬ್ಬ ವೃದ್ಧ ತಂದೆಯು ವೈನ್ ಕುಡಿದು ತನ್ನ ಹೆಣ್ಣುಮಕ್ಕಳೊಂದಿಗೆ ಲೈಂಗಿಕ ಸಂಬಂಧವನ್ನು ಬೆಳೆಸಿ ಸಂತಾನ ಉತ್ಪತ್ತಿಮಾಡಿದ ಕತೆಯಿದೆ. ಏಂಜೆಲ್ ಎಂದುಕೊಂಡ ಗಾಬ್ರಿಯಲ್ ಎಂಬಾತನು ಕನ್ಯೆಯಾದ ಮೇರಿಯ ಮೇಲೆ ಬಲಾತ್ಕಾರ ಮಾಡಿ ಹುಟ್ಟಿಸಿದ ಮಗುವೇ ಯೇಸುಕ್ರಿಸ್ತರೆಂದು ಬೈಬಲಿನಿಂದಲೇ ಸ್ಪಷ್ಟವಾಗುತ್ತದೆ. ಇಂತಹ ವ್ಯಭಿಚಾರದ ಕತೆಗಳು ಬೈಬಲಿನಲ್ಲಿ ತುಂಬಾ ಇವೆ. ಇದನ್ನು ಪವಿತ್ರ ಗ್ರಂಥವೆಂದು ಕರೆಯುವುದಾದರೆ, ಅಪವಿತ್ರ ಗ್ರಂಥವೆಂದು ಯಾವುದನ್ನು ಹೇಳಬೇಕೋ ಗೊತ್ತಾಗವುದಿಲ್ಲ. ಇನ್ನು ಇತಿಹಾಸ, ವಿಜ್ಞಾನ, ತರ್ಕ, ಸತ್ಯ ಇತ್ಯಾದಿಗಳಿಗೆ ವಿರುದ್ಧವಾಗಿರುವ ಮಾತುಗಳು ಬೈಬಲಿನಲ್ಲಿ ಸಾಕಷ್ಟು ಇವೆ.[12] ಇಂತಹ ಗ್ರಂಥವನ್ನು ಜಗತ್ತಿನಲ್ಲಿ ಸರ್ವಶ್ರೇಷ್ಠ ಗ್ರಂಥವೆಂದು ನಂಬಿದವನು ಎಷ್ಟು ಬಲ್ಲವನಿರಬೇಕು? ಆದರೂ, ವೇದಗಳ ಅನುವಾದ ಮಾಡಿದುದರಿಂದ ಅವನೂ ಒಬ್ಬ ಋಷಿ ಎಂದು ನಮ್ಮ ದೇಶದಲ್ಲಿ ಪ್ರಚಾರವಾಯಿತು. ಈ 'ಋಷಿಯು' ಭಾರತೀಯ ಸಂಸ್ಕೃತಿಯ ಬೇರನ್ನೇ ಕಿತ್ತೊಗೆಯುವ

---

11. ''We know that the early Vedic period was a cattle raising age. The lowing of kine was lovely music to the ear of the Vedic poet.'' Maurice Bloom field, The Religion of the Veda. Lecture VI. Page 23.

''The form, the mythological relations, represented in the older hymns of the Rk, in part carry us back to the primitive Indo-Germanic time. The contain relics of the wild life and naive conceptions then prevailing, such as may also be traced among the Jeuton and Greeks.' Albert weber, The History of Indian Literature. London. 1878. Page 35.

12) Ref. The Bible unmasked by Mr. Joseph Lewis, The Free Thought Press Association, 1928. New York.

ಉದ್ದೇಶದಿಂದ ತಾನು ವೇದಗಳ ಅನುವಾದ ಮಾಡಿದ್ದೇನೆಂದು ತನ್ನ ಪತ್ನಿಗೆ ಬರೆದ ಒಂದು ಪತ್ರದಲ್ಲಿ ಹೇಳಿದ್ದಾನೆ.[13]

ಈ ಪರಿಸ್ಥಿತಿಯಲ್ಲಿ, ಪಾಶ್ಚಾತ್ಯ ಭಾಷ್ಯಕಾರರ ವೇದ ಭಾಷ್ಯಗಳನ್ನೋ ಅಥವಾ ವೇದಗಳ ಕುರಿತಾಗಿ ಅವರು ಬರೆದ ಗ್ರಂಥಗಳನ್ನೋ ನಮ್ಮ ವಿಶ್ವವಿದ್ಯಾಲಯಗಳಲ್ಲಿ ವಿದ್ಯಾರ್ಥಿಗಳಿಗೆ ಮಾರ್ಗದರ್ಶನಕ್ಕಾಗಿ ಇಟ್ಟಿರುವುದು ಎಷ್ಟು ವಿಷಾದಕರವಾದ ಮಾತಾಗಿದೆ! ಇದು ನಿಜವಾಗಿಯೂ ವೇದ ವಿರೋಧಿ ಕಾರ್ಯವಾಗಿದೆ.

ವೇದಮಂತ್ರಗಳನ್ನು ಅರಿತುಕೊಳ್ಳಬೇಕಾದರೆ, ವೇದದಲ್ಲಿಯೇ ಹೇಳಿಕೊಟ್ಟ ಮಾರ್ಗದಲ್ಲಿ ಹೋಗಬೇಕು. ಋಷಿಗ್ರಂಥಗಳ ಅಧ್ಯಯನ ಮಾಡಬೇಕು. ಹೀಗೆ ಮಾಡಿದರೆ ಮಾತ್ರ ವೇದಗಳ ಅಧ್ಯಯನದಿಂದ ನಮ್ಮ ವಿಶ್ವವಿದ್ಯಾಲಯಗಳ ವಿದ್ಯಾರ್ಥಿಗಳಿಗೆ ಏನಾದರೂ ಪ್ರಯೋಜನವಾದೀತೇ ಹೊರತು, ಸಾಯಣಾದಿ ಅಲ್ಪಬುದ್ಧಿಯ ಪಂಡಿತರ ಮತ್ತು ಆಧುನಿಕ ಯುರೋಪಿನ ವಿದ್ವಾಂಸರ ವೇದಭಾಷ್ಯಗಳಿಂದ ಏನೂ ಲಾಭವಾಗುವಂತಿಲ್ಲ.

---

13) Ref. The Life and letters of the Right Honourable Freidrich Max Muller, Longmann Green and Co. London. 1902. Vol. Ch. XV.

# ಬ್ರಹ್ಮಶಕ್ತಿ, ಕ್ಷಾತ್ರಶಕ್ತಿ

ಹಿಂದೀ ಮೂಲ: ಜಗದೀಶ ವಿದ್ಯಾರ್ಥೀ
ಕನ್ನಡಕ್ಕೆ: ಗುಂಡ್ಮಿ, ಚಂದ್ರಶೇಖರ ಐತಾಳ

**ಯತ್ರ ಬ್ರಹ್ಮ ಚ ಕ್ಷತ್ರಂ ಚ ಸಮ್ಯಂಚೌ ಚರತಃ ಸಹ ।**
**ತಂ ಲೋಕಂ ಪುಣ್ಯಂ ಪ್ರಜ್ಞೇಷಂ ಯತ್ರ ದೇವಾಃ ಸಹಾಗ್ನಿನಾ ॥**
(ಯಜುರ್ವೇದ: ೨೦-೨೫)

ಯಾವ ರಾಷ್ಟ್ರದಲ್ಲಿ, ಯಾವ ಲೋಕದಲ್ಲಿ, ಯಾವ ದೇಶದಲ್ಲಿ, ಯಾವ ಸ್ಥಾನದಲ್ಲಿ ಜ್ಞಾನ ಮತ್ತು ಶಕ್ತಿ, ಬ್ರಹ್ಮಶಕ್ತಿ, ಕ್ಷಾತ್ರಶಕ್ತಿಗಳು, ಬ್ರಹ್ಮತೇಜ, ಕ್ಷಾತ್ರತೇಜಗಳು ಸಂಯುಕ್ತವಾಗಿ ಒಟ್ಟೊಟ್ಟಿಗೆ ನಡೆಯುತ್ತವೋ, ಎಲ್ಲಿ ನಾಗರಿಕರು ರಾಷ್ಟ್ರೋನ್ನತಿಯ ಭಾವನೆಗಳಿಂದ ತುಂಬಿ ತುಳುಕುತ್ತಿರುತ್ತಾರೋ ಆ ರಾಷ್ಟ್ರವನ್ನು ನಾನು ಪವಿತ್ರ, ಉತ್ಕೃಷ್ಟ ಎಂದು ಒಪ್ಪುತ್ತೇನೆ.

ರಾಷ್ಟ್ರವನ್ನು ಒಂದು ರಥಕ್ಕೆ ಹೋಲಿಸಿದರೆ ಬ್ರಹ್ಮಶಕ್ತಿ, ಕ್ಷಾತ್ರಶಕ್ತಿಗಳು ಅದರ ಎರಡು ಚಕ್ರಗಳು. ಹೇಗೆ ಎರಡು ಚಕ್ರಗಳೂ ಸರಿಯಾಗಿದ್ದರೆ ಮಾತ್ರ ರಥ ಸರಿಯಾಗಿ ನಡೆಯುವುದು ಸಾಧ್ಯವೋ ಹಾಗೆಯೇ ಯಾವ ರಾಷ್ಟ್ರದಲ್ಲಿ ಬ್ರಹ್ಮತೇಜ, ಕ್ಷಾತ್ರತೇಜಗಳು ಒಟ್ಟೊಟ್ಟಿಗೆ ನಡೆಯುತ್ತವೋ ಆ ರಾಷ್ಟ್ರವೇ ಆದರ್ಶರಾಷ್ಟ್ರವೆನಿಸುತ್ತದೆ.

ಇದೇ ಮಂತ್ರವನ್ನು ವ್ಯಾಖ್ಯಾನಿಸುತ್ತ ಗೀತೆಯ ಅಂತ್ಯದಲ್ಲಿ ಸಂಜಯ ಹೇಳುತ್ತಾನೆ.

**ಯತ್ರ ಯೋಗೇಶ್ವರ ಕೃಷ್ಣೋ ಯತ್ರ ಪಾರ್ಥೋ ಧನುರ್ಧರಃ ।**
**ತತ್ರ ಶ್ರೀರ್ವಿಜಯೋ ಭೂತಿರ್ಧ್ರುವಾ ನೀತಿರ್ಮತಿರ್ಮಮ ॥**
(ಗೀತಾ: ೧೮-೭೮)

ಧೃತರಾಷ್ಟ್ರ! ಯೋಗೇಶ್ವರನಾದ ಕೃಷ್ಣನಲ್ಲಿ ಬ್ರಹ್ಮಶಕ್ತಿ, ಧನುರ್ಧಾರಿಯಾದ ಅರ್ಜುನನಲ್ಲಿ ಕ್ಷಾತ್ರಶಕ್ತಿ ಇರುವುದರಿಂದ ಅಲ್ಲಿಯೇ ಲಕ್ಷ್ಮೀ, ವಿಜಯ, ಐಶ್ವರ್ಯಗಳ ಸಮೃದ್ಧಿ, ನ್ಯಾಯಗಳು ನೆಲಸುತ್ತವೆ. ಇದು ನನ್ನ ಅಭಿಪ್ರಾಯ.

ರಾಷ್ಟ್ರಕ್ಕೆ ಅನ್ವಯಿಸುವ ಮಾತು ವ್ಯಕ್ತಿಗೂ ಅನ್ವಯಿಸುತ್ತದೆ. ನಮ್ಮ ಜೀವನದಲ್ಲಿ ಬ್ರಹ್ಮಬಲ, ಕ್ಷಾತ್ರಬಲಗಳೆರಡೂ ಮಿಳಿತವಾಗಬೇಕು. ಆಚಾರ್ಯ ದ್ರೋಣನು ಮಹಾರಾಜ ದ್ರುಪದನನ್ನು ಸಂಬೋಧಿಸಿ ಇದನ್ನೇ ಹೇಳಿದ:

**ಅಗ್ರತಃ ಚತುರೋ ವೇದಾಃ ಪೃಷ್ಠತಃ ಸಶರಂ ಧನುಃ ।**
**ಇದಂ ಬ್ರಾಹ್ಮಮಿದಂ ಕ್ಷಾತ್ರಂ ಶಾಸ್ತ್ರಾದಪಿ ಶರಾದಪಿ ॥**

ನಾಲ್ಕು ವೇದಗಳೂ ನನ್ನ ಮುಂದಿವೆ. ಹಿಂದೆ ಧನುರ್ಬಾಣಗಳಿವೆ. ಶಾಸ್ತ್ರ ಶಸ್ತ್ರಗಳೆರಡರಿಂದಲೂ ನಾನು ನಿನ್ನ ಮಾನಮರ್ದನ ಮಾಡಲು ಸಿದ್ಧ.

ಯಾವುದೇ ರಾಷ್ಟ್ರದಲ್ಲಿ ಎರಡೂ ಶಕ್ತಿಗಳ ಸಹವಿಕಾಸವಾಗಬೇಕು. ರಾಷ್ಟ್ರದಲ್ಲಿ ಬ್ರಹ್ಮಶಕ್ತಿಯನ್ನು ನಾಶಮಾಡಬೇಕೆಂದು ಯಾರಾದರೂ ಬಯಸಿದಲ್ಲಿ ವೇದ ಹೀಗೆ ಹೇಳುತ್ತದೆ.

**ವೃಶ್ಚ ಪ್ರವೃಶ್ಚ ಸಂ ವೃಶ್ಚ ದಹ ಪ್ರದಹ ಸಂ ದಹ ।** [ಅಥರ್ವ: ೧೨-೫-೬೨]

ಅದನ್ನು ಕತ್ತರಿಸು, ಚೆನ್ನಾಗಿ ಕತ್ತರಿಸು, ಸಂಪೂರ್ಣವಾಗಿ ಕತ್ತರಿಸು; ಅದನ್ನು ಸುಡು, ಚೆನ್ನಾಗಿ ಸುಡು, ಸಂಪೂರ್ಣವಾಗಿ ಸುಟ್ಟುಹಾಕು.

**ಆಮೂಲಾದನು ಸಂ ದಹ ॥** [ಅಥರ್ವ: ೧೨-೫-೬೩]

ಬುಡಸಹಿತ ಅದನ್ನು ಕಿತ್ತುಹಾಕು.

ಇದೇ ಮಾತನ್ನು ಕ್ಷಾತ್ರಶಕ್ತಿಯ ಬಗೆಗೂ ಅನ್ವಯಿಸಿಕೊಳ್ಳಿ.

---

## ಆದರ್ಶ ರಾಷ್ಟ್ರ

**ಆ ಬ್ರಹ್ಮನ್ ಬ್ರಾಹ್ಮಣೋ ಬ್ರಹ್ಮವರ್ಚಸೀ ಜಾಯತಾಮಾರಾಷ್ಟ್ರೇ ರಾಜನ್ಯಃ ಶೂರ ಇಷವ್ಯೋಽತಿವ್ಯಾಧೀ ಮಹಾರಥೋ ಜಾಯತಾಂ ದೋಗ್ಧ್ರೀ ಧೇನುರ್ವೋಢಾ ನಡ್ವಾನಾಶುಃ ಸಪ್ತಿಃ ಪುರಂಧ್ರಿರ್ಯೋಷಾ ಜಿಷ್ಣೂ ರಥೇಷ್ಠಾಃ ಸಭೇಯೋ ಯುವಾಸ್ಯ ಯಜಮಾನಸ್ಯ ವೀರೋ ಜಾಯತಾಂ ನಿಕಾಮೇ ನಿಕಾಮೇ ನಃ ಪರ್ಜನ್ಯೋ ವರ್ಷತು ಫಲವತ್ಯೋ ನ ಓಷಧಯಃ ಪಚ್ಯಂತಾಂ ಯೋಗಕ್ಷೇಮೋ ನಃ ಕಲ್ಪತಾಮ್ ॥** (ಯಜುರ್ವೇದ: ೨೨-೨೨)

ಈ ಮಂತ್ರದಲ್ಲಿ ಒಂದು ಆದರ್ಶ ರಾಷ್ಟ್ರದ ವರ್ಣನೆ ಇದೆ. ಮಹತೋ ಮಹಾನ್ ಪರಮಾತ್ಮ!

೧. ನಮ್ಮ ರಾಷ್ಟ್ರದಲ್ಲಿ ಬ್ರಾಹ್ಮಣರು ಬ್ರಹ್ಮತೇಜಸ್ಸಿನಿಂದ ಕೂಡಿರಲಿ. ಅವರು ಜ್ಞಾನದೀಪ್ತಿಯಿಂದ ದೀಪ್ತರಾಗಿರಲಿ. ಬ್ರಾಹ್ಮಣ ಎಂದರೆ ಯಾರು? ಬ್ರಾಹ್ಮಣನ ಮನೆಯಲ್ಲಿ ಹುಟ್ಟಿದವನು ಬ್ರಾಹ್ಮಣನಲ್ಲ. ಸಾಧನೆಯಿಂದ ಬ್ರಾಹ್ಮಣನೆನಿಸುತ್ತಾನೆ. ರಾಷ್ಟ್ರಕ್ಕೆ ಸನ್ಮಾರ್ಗ ತೋರಿಸುವ ಋಷಿಗಳೂ, ಮುನಿಗಳೂ, ಮೇಧಾವಿಗಳೂ ಬ್ರಾಹ್ಮಣರೆನಿಸುತ್ತಾರೆ. ನಿಜವಾದ ಬ್ರಾಹ್ಮಣ ಮಾತ್ರ ಅವಿದ್ಯಾನಾಶವನ್ನೂ, ವಿದ್ಯಾವೃದ್ಧಿಯನ್ನೂ ಮಾಡಬಲ್ಲ.

೨. ಕ್ಷತ್ರಿಯರು ಶೂರವೀರರೂ, ಶಸ್ತ್ರಾಸ್ತ್ರಗಳನ್ನು ಪ್ರಯೋಗಿಸುವುದರಲ್ಲಿ ನಿಪುಣರೂ, ಶತ್ರುಗಳನ್ನು ಉದ್ವಿಗ್ನಗೊಳಿಸಬಲ್ಲ ಮಹಾರಥಿಗಳೂ ಆಗಲಿ. ಆಂತರಿಕ ಹಾಗೂ ಬಾಹ್ಯ ಶತ್ರುಗಳೊಡನೆ ಯುದ್ಧಮಾಡಲೂ, ದೇಶರಕ್ಷಣೆಯನ್ನು ಮಾಡಲೂ ರಾಷ್ಟ್ರದಲ್ಲಿ ಕ್ಷತ್ರಿಯ ವೀರರಿರಲಿ.

೩. ಸಮೃದ್ಧಿಯಾಗಿ ಹಾಲನ್ನು ಕರೆಯುವ ಹಸುಗಳಾಗಲಿ, ದೇಶದ ನಾಗರಿಕರನ್ನು ಸ್ವಸ್ಥರನ್ನಾಗಿಯೂ, ಹೃಷ್ಟಪುಷ್ಟರನ್ನಾಗಿಯೂ, ಬಲಿಷ್ಠರನ್ನಾಗಿಯೂ ಮಾಡಲು ರಾಷ್ಟ್ರದಲ್ಲಿ ಗೋಸಂಪತ್ತಿರಬೇಕು. ಗೋವಿನ ಹಾಲನ್ನೂ, ಗೋವಿನ ಹಾಲಿನಿಂದ ತಯಾರಿಸಿದ ಪದಾರ್ಥಗಳನ್ನೂ ಉಪಭೋಗಿಸುವ ರಾಷ್ಟ್ರ ಉನ್ನತಿಯನ್ನು ಹೊಂದುತ್ತದೆ.

೪. ಎತ್ತುಗಳು ಭಾರವನ್ನು ಹೊರಲಿ.

೫. ಕುದುರೆಗಳು ಶೀಘ್ರಗಾಮಿಗಳಾಗಲಿ.

೬. ಸ್ತ್ರೀಯರು ನಗರಪಾಲಿಕೆಯರಾಗಲಿ.

೭. ಈ ಯಜ್ಞಶೀಲ ರಾಷ್ಟ್ರದ ಯುವಕ ಸಭಾಸಂಚಾಲನೆಯಲ್ಲಿ ಕುಶಲನೂ, ವಿಜಯಶೀಲನೂ, ವೀರನೂ, ಮಹಾರಥಿಯೂ ಎನ್ನಿಸಲಿ.

ಭಾರತಮಾತೆಯ ಮಕ್ಕಳೆಲ್ಲರೂ ಈ ಉಪದೇಶಗಳನ್ನು ಹೃದಯಸ್ಥಗೊಳಿಸಿಕೊಳ್ಳಬೇಕು. ರಾಷ್ಟ್ರರಕ್ಷಣೆಯ ಉತ್ತರಾಧಿಕಾರವು ದೇಶದ ಯುವಕ ಯುವತಿಯರ ಮೇಲೆ ನಿದ್ದಿದೆ.

೮. ನಾವು ಬಯಸಿದಷ್ಟು ವೃಷ್ಟಿಯಾಗಲಿ.

೯. ಸಸ್ಯಗಳು ನಮಗೆ ಫಲಗಳನ್ನು ನೀಡಲಿ.

೧೦. ನಮ್ಮ ಯೋಗಕ್ಷೇಮ ಸಿದ್ಧವಾಗಲಿ. ಅಪ್ರಾಪ್ತವಾದುದು ಪ್ರಾಪ್ತಿಯಾಗುವುದಕ್ಕೆ ಯೋಗವೆಂದೂ, ಪ್ರಾಪ್ತಿಯಾದುದನ್ನು ರಕ್ಷಿಸಿಕೊಳ್ಳುವುದಕ್ಕೆ ಕ್ಷೇಮವೆಂದೂ ಹೆಸರು. ತಾತ್ಪರ್ಯವಿಷ್ಟು: ರಾಷ್ಟ್ರದ ಆವಶ್ಯಕತೆಗಳು ಸುಗಮವಾಗಿ ನೆರವೇರುತ್ತಿರಲಿ.

ಆದರ್ಶ ರಾಷ್ಟ್ರಕ್ಕಾಗಿ ಇಲ್ಲಿ ಹತ್ತು ಮಾತುಗಳನ್ನು ಹೇಳಲಾಗಿದೆ. ನನ್ನ ಸಾಹಿತ್ಯ ಜ್ಞಾನ ಬಹಳ ಕಡಿಮೆ. ನಾನು ಓದಿಕೊಂಡಷ್ಟರ ಆಧಾರದಿಂದ ನಾನು ಇಷ್ಟು ಹೇಳಬಲ್ಲೆ. ಪ್ರಪಂಚದ ಯಾವುದೇ ಸಾಹಿತ್ಯವನ್ನು ಹುಡುಕಿನೋಡಿ; ಆದರ್ಶ ರಾಷ್ಟ್ರದ ಇದಕ್ಕಿಂತ ಸುಂದರ, ಭವ್ಯ, ಶ್ರೇಷ್ಠ ಕಲ್ಪನೆ ನಮಗೆ ಎಲ್ಲಿಯೂ ದೊರಕಲಾರದು.

---

## ಆತ್ಮ ನಿರೀಕ್ಷಣೆ

**ಯನ್ಮೇ ಛಿದ್ರಂ ಚಕ್ಷುಷೋ ಹೃದಯಸ್ಯ ಮನಸೋ ವಾತಿತೃಣ್ಣಂ**
**ಬೃಹಸ್ಪತಿರ್ಮೇ ತದ್ದಧಾತು ।**
**ಶನ್ನೋ ಭವತು ಭುವನಸ್ಯ ಯಸ್ಪತಿಃ ॥**

(ಯಜುರ್ವೇದ: ೩೬—೨)

ನನ್ನ ಕಣ್ಣು, ಹೃದಯ, ಮನಸ್ಸುಗಳ ದೋಷಗಳನ್ನು, ಹೇ ಪರಮೇಶ್ವರ! ದೂರಗೊಳಿಸು. ಎಲ್ಲ ಲೋಕಗಳ ಅಧಿಪತಿಯಾಗಿರುವ ನೀನು ನಮಗೆ ಸುಖಕಾರಿಯೂ, ಶಾಂತಿದಾಯಕನೂ ಆಗಿರು.

ಮನುಷ್ಯನು ಶಾಂತ-ಏಕಾಂತ ಸ್ಥಾನದಲ್ಲಿ ಕುಳಿತು ತನ್ನ ಇಂದ್ರಿಯಗಳ ನಿರೀಕ್ಷಣೆ ಮಾಡಲಿ. ಇಂದಿನ ದಿನವಿಡೀ ನಮ್ಮ ಕಣ್ಣುಗಳಿಂದ ಯಾವ ಕೆಟ್ಟ ಕೆಲಸವೂ ನಡೆಯಲಿಲ್ಲ. ನಮ್ಮ ಕಿವಿಗಳು ಅಶ್ಲೀಲ ಶಬ್ದಗಳನ್ನು ಕೇಳಲಿಲ್ಲ. ನಮ್ಮ ವಾಣಿಯು ಅಪಶಬ್ದಗಳನ್ನು ಉಚ್ಚರಿಸಲಿಲ್ಲ. ನಮ್ಮ ಹೃದಯ ಮನಸ್ಸುಗಳು ಯಾರಿಗೂ ಕೆಡುಕನ್ನು ಹಾರೈಸಲಿಲ್ಲ. ನಮ್ಮ ಇಂದ್ರಿಯಗಳಲ್ಲಿ ಎಲ್ಲಿಯಾದರೂ ಲೋಪ, ದೋಷ, ನ್ಯೂನತೆಗಳು ಕಂಡುಬಂದಲ್ಲಿ ಇಂದ್ರಿಯಗಳನ್ನು ಸುಧಾರಿಸಿ ನಮ್ಮ ಮನಸ್ಸು, ಹೃದಯಗಳನ್ನು ಶುದ್ಧಗೊಳಿಸಿಕೊಳ್ಳಬೇಕು. ಹೃದಯ ಶುದ್ಧಿಗಾಗಿ ದೇವರನ್ನು ಪ್ರಾರ್ಥಿಸಿಕೊಳ್ಳಬೇಕು.

ನಮ್ಮ ಜೀವನವನ್ನು ಪವಿತ್ರವೂ, ನಿರ್ಮಲವೂ ಆಗಿರುವಂತೆ ಇಟ್ಟುಕೊಳ್ಳಲು ಆತ್ಮ ನಿರೀಕ್ಷಣೆ ಅತ್ಯಂತ ಆವಶ್ಯಕ. ಯಾವನೋ ಒಬ್ಬ ಉರ್ದು ಕವಿ ಎಷ್ಟು ಸರಿಯಾಗಿ ಹೇಳಿದ್ದಾನೆ:

**ಕಶಾ ಕಶೀಯೇ ಜಿಂದಗೀ ಸೆ ಬಚ್‌ಕರ್**
**ಕಭೀ ತೋ ಖಿಲ್ವತ್ ನಶೀಂ ಹುವಾ ಕರ್ ।**
**ಇಸ್‌ಮೇ ವೋ ಹೈ ಕುದರತ್ ಕೀ ಬೂಂದ್**
**ಪಾನೀ ಕೋ ಗೋಹರ್ ಆಬ್‌ದಾರ್ ಕರ್‌ದೇ॥**

ತನ್ನ ಜೀವನವನ್ನು ನಿರೀಕ್ಷಣೆ ಮಾಡಿಕೊಂಡು, ಕುಡುಕನೂ, ಅಸತ್ಯವಾದಿಯೂ ಆಗಿದ್ದ ಟಾಲ್‌ಸ್ಟಾಯ್, ಮಹಾತ್ಮ ಟಾಲ್‌ಸ್ಟಾಯ್ ಎನ್ನಿಸಿಕೊಂಡ. ಆತ್ಮ ನಿರೀಕ್ಷಣೆ ಮಾಡಿಕೊಳ್ಳುತ್ತ ಕುಡುಕನೂ, ಮಾಂಸ ಭಕ್ಷಕನೂ ಆಗಿದ್ದ ಮುನ್ಶೀರಾಮ್, ಮಹಾತ್ಮ ಮುನ್ಶೀರಾಮ್ (ಸ್ವಾಮೀ ಶ್ರದ್ಧಾನಂದ) ಎನ್ನಿಸಿದನು. ನಿಮ್ಮ ಜೀವನವನ್ನು ನಿರೀಕ್ಷಣೆ ಮಾಡಿಕೊಂಡು ನೀವೂ ಮಹಾತ್ಮರೆನ್ನಿಸಿಕೊಳ್ಳಬಲ್ಲಿರಿ.

ಪ್ರತಿದಿನ ಕೆಲವು ಕಾಲ ಏಕಾಂತದಲ್ಲಿ ಕುಳಿತುಕೊಳ್ಳಿರಿ. ನಿಮ್ಮ ಜೀವನದ ಅಧ್ಯಯನ ಮಾಡಿರಿ. ಆ ದಿನದ ನಿಮ್ಮ ಕೆಲಸಗಳನ್ನೆಲ್ಲ ಪರ್ಯಾಲೋಚಿಸಿರಿ.

**ಉದಾಯುರುದ್ ಬಲಮುತ್ ಕೃತಮುತ್ ಕೃತ್ಯಾಮುನ್ಮ**
**ನೀಷಾಮು ದಿಂದ್ರಿಯಮ್ ।** [ಅಥರ್ವ: ೫-೯-೮]

ನಿಮ್ಮ ಜೀವನವನ್ನು ಉತ್ಕೃಷ್ಟವೂ ಉತ್ತಮವೂ ಆಗುವಂತೆ ನೋಡಿಕೊಳ್ಳಿ. ಶ್ರೇಷ್ಠ ಬಲ ವನ್ನು ಸಂಪಾದಿಸಿರಿ. ಉತ್ತಮ ಕಾರ್ಯಗಳನ್ನು ಮಾಡಿರಿ, ಉತ್ಕೃಷ್ಟ ಕರ್ತವ್ಯವನ್ನು ಮಾಡಿರಿ. ಬುದ್ಧಿಯನ್ನು ತೀಕ್ಷ್ಣಗೊಳಿಸಿರಿ; ಇಂದ್ರಿಯ ಸಾಮರ್ಥ್ಯವನ್ನು ಹೆಚ್ಚಿಸಿಕೊಳ್ಳಿರಿ. ಆತ್ಮ ನಿರೀಕ್ಷಣೆಯು ಎಂತ ಉದಾತ್ತ ಪ್ರೇರಣೆ ಇದು!

ಬೇರೆಯವರ ಲೋಪದೋಷ ಹುಳುಕುಗಳ ಸ್ಥಾನದಲ್ಲಿ ಆತ್ಮಪರೀಕ್ಷೆಯನ್ನು ಮಾಡಿಕೊಳ್ಳಿರಿ. ವೇದದ ಸಂದೇಶವಿದು:

**ಲೋಕಂ ಪೃಣ ಛಿದ್ರಂ ಪೃಣಾಥೋ ಸೀದ ಧ್ರುವಾ ತ್ವಮ್ ।**
[ಯಜುರ್ವೇದ: ೧೨-೫೪]

ಮಾನವ! ನೀನು ನಿನ್ನ ಶರೀರ, ಜೀವನಗಳನ್ನು ಪರಿಪೂರ್ಣಗೊಳಿಸಿಕೋ, ನಿನ್ನ ಜೀವನದ ಕೊರತೆಯನ್ನು ನೀಗಿಸಿಕೋ. ಅಲ್ಲದೆ, ಈ ಶರೀರದಲ್ಲಿ ಸ್ಥಿರವಾಗಿ ವಾಸಮಾಡು.

---

# ಮಾನವ ಧರ್ಮಕ್ಕಾಗಿ ಬಾರಿಸುತ್ತಿದೆ—ಕಾಲದ ಗಂಟೆ

★ ಎ. ಶ್ರೀಪತಿ ಆಚಾರ್ಯ

**ಸಾಂಸ್ಕೃತಿಕ ಅಧಃಪಾತ:—**

ಸನಾತನ ಧರ್ಮ ಮಾನವಮಾತ್ರರ ಉದ್ಧಾರವನ್ನು ತೋರುವುದಾಗಿದೆ. ಹೀಗಾಗಿ ಜನ್ಮನಾ ಹಿಂದುಳಿದ ಕುಟುಂಬದಲ್ಲಿದ್ದರೂ ಆತ್ಮೋದ್ಧಾರದ ಮಾರ್ಗವನ್ನು ಕಂಡು ಸಾಂಸ್ಕೃತಿಕ ಉತ್ಕರ್ಷದ ಹಾದಿಯನ್ನು ಹಿಡಿಯಬೇಕಾಗಿದ್ದವರನ್ನು ಚರಿತ್ರೆಯ ಕತ್ತಲಕಾಲದ ಬೆಳಕೇ ಮುನ್ನಡೆಯದುದರಿಂದ ಏಣಿಹತ್ತಬೇಕಾದವರು ಏಣಿ ಇಳಿಯುತ್ತಾ ಸಾಗುವಂತಾದುದು ದುರದೃಷ್ಟಕರ! ಅರ್ಥಾತ್, ಸ್ಪೃಶ್ಯರಾಗಿ ಗೌರವಾನ್ವಿತರೆನಿಸಬೇಕಾಗಿದ್ದವರನ್ನು 'ಅಸ್ಪೃಶ್ಯ

ರನ್ನಾಗಿಸಿದರು; ಮೊದಲಾಗಿ ಹೆಸರನ್ನಿಟ್ಟು, ಬಳಿಕ ಸಂಸ್ಕೃತಿಯನ್ನು ಸಂಪಾದಿಸಲಾರದ ಹಂತಕ್ಕೆ ಅವರನ್ನು ತಳ್ಳಿ! ಸಂಸ್ಕೃತಿಯನ್ನು ನೀಡಿ ಮೇಲೆತ್ತುವ ಸುಧಾರಕರಾಗಲೀ ಮತಾಚಾರ್ಯರಾಗಲೀ ಸಮಾಜದಲ್ಲಿ ಇಲ್ಲದೆ ಹೋದರು! ಅಥವಾ, ಆಡಳಿತದವರ, ಧರ್ಮವನ್ನು ಮಾನವೀಯವಾಗಿ ಅರ್ಥಮಾಡಿಕೊಳ್ಳದವರ, ನಡುವೆ ಈ ಜನರು ಸಂಸ್ಕರಣಗೊಳ್ಳುವುದು ಸಾಧ್ಯವಾಗದೇ ಹೋಗಿರಬೇಕು! ಇಷ್ಟಾಗ್ಯೂ ಇತ್ತೀಚಿನ ವರೆಗಿನ ಸಮಾಜದಲ್ಲಿ (ಸ್ವಾತಂತ್ರ್ಯಪೂರ್ವದ) ಸಹಕಾರ ಸಹಯೋಗದಲ್ಲಿ ಸಾಮರಸ್ಯದಿಂದ ಸಾವಯವ ಬದುಕನ್ನು ಈ ಮಂದಿ ಬಾಳಿದ್ದರು ಎಂದರೆ ಧರ್ಮದ ಯಾವುದೋ ಚಿರಂತನ ಚೇತನ ಸೂಕ್ಷ್ಮವಾಗಿಯಾದರೂ ಆ ಬಂಧವನ್ನು ಸಂಭಾಳಿಸಿತ್ತು ಎಂದು ನಂಬಬಹುದಾಗಿದೆ! ಆ ಬಂಧವೂ ಇಂದು ಶಿಥಿಲವಾಗಿದೆಯೆಂದರೆ ಅಳಿದುಳಿದ ಸಾಂಸ್ಕೃತಿಕ ಅಂಶವೆಷ್ಟು ಎಂಬುದು ವಿವೇಚನಾರ್ಹ!!

ಇಂದಿನ ವಿಸ್ತೃತ ಮತಾಂತರವನ್ನೊಮ್ಮೆ ಪರಿಕಿಸೋಣ. ಇದು ಸಾಂಸ್ಕೃತಿಕ ಎಳೆಯೊಂದು ಕಾಡಿದುದರ ಸಂಕೇತವಲ್ಲವೆ? ಮತಾಂತರದ ಹಿಂದೆ ಅದೇನೆ ಕಾರಣಗಳಿರಲಿ—ಕಾರಣಗಳೂ ಬಹಳಷ್ಟು ವಿವಾದಾತ್ಮಕವಾಗಿ ಕೇಳಿಬರುತ್ತವೆ: ಇವೆ-ಒಂದು ಮಾತಂತೂ ವಿವಾದಾತೀತ! ಅದೇನೆಂದರೆ, 'ಸಂಸ್ಕೃತಿ' ಈ ಜನಸಮುದಾಯವನ್ನು ಮಾತೃಧರ್ಮದಲ್ಲಿ ಉಳಿಸಿಕೊಳ್ಳಲಿಲ್ಲ ಎಂಬ ಮಾತು! (ತಾ· 21-3-81ರ 'ಟೈಮ್ಸ್ ಆಫ್ ಇಂಡಿಯಾ'ದ ದೆಹಲಿ ಆವೃತ್ತಿಯ ವರದಿ; 'ಅರಬ್ ಟೈಂಸ್' ಪತ್ರಿಕೆಯ ವರದಿ; ಲಂಡನ್ 'ಇಸ್ಲಾಂ ಸಾಂಸ್ಕೃತಿಕ ಕೇಂದ್ರ'ದ ಯೋಜನೆಗಳ ಪತ್ರಿಕಾ ವರದಿ; ಮೊರದಾಬಾದ್ ಬಳಿಯ ಬರುಲ್-ಉಲ್-ಉಲುಮ್ ಎಂಬ ಇಸ್ಲಾಮೀಯಾ ಅಧ್ಯಯನ ಕೇಂದ್ರಕ್ಕೆ ಇಸ್ಲಾಮೀ ದೇಶಗಳಿಂದ ಬರುತ್ತಿರುವುದೆಂದು ಆರೋಪಿಸಲಾದ ಧನಸಹಾಯದ ಕುರಿತು ಪತ್ರಿಕಾವರದಿ-ಇವೆಲ್ಲವನ್ನೂ ಅಲಕ್ಷ್ಯದಿಂದ ಕಂಡು ಮೇಲಿನ ಮಾತಲ್ಲ!) ಸಂಸ್ಕೃತಿಯ ಮಾತು ಸಮಸ್ಯೆಯ ಇನ್ನೊಂದು ಮುಖ. ಸಂಸ್ಕೃತಿ ಇದ್ದುದೇ ಆದಲ್ಲಿ ಮೌಲ್ಯಾದರ್ಶಗಳಿಗೆ ಬೆಲೆ ಇದ್ದುದೇ ಆದಲ್ಲಿ ಈ ಸಾಮೂಹಿಕ ಮತಾಂತರ ಶಕ್ಯವಾಗುತ್ತಿತ್ತೆ? ಮೌಲಿಕ ಆದರ್ಶಗಳ ಎದುರು ಮೌಢ್ಯದ ಆಮಿಷಗಳು ಎಷ್ಟರವು? ಇದಕ್ಕೆ, ಮೌಲ್ಯಗಳಿಲ್ಲದ ಪಕ್ಷಾಂತರಗಳು ಆಗುತ್ತಿರುವುದೂ ಕಾರಣವೆನ್ನುವವರಿರಬಹುದು. ಆಗಲೂ, ಸಾಂಸ್ಕೃತಿಕ ಕೊರತೆಯೇ ಅಲ್ಲವೇ ನಮ್ಮನ್ನು 'ಅಂತರ ಪಶು'ಗಳ ಹಂತಕ್ಕೆ ತಳ್ಳಿದ್ದು! ಇಂಥ ಒಂದು ದುಸ್ಥಿತಿಗೆ ಏನುಕಾರಣ, ಯಾರು ಕಾರಣ, ಮೂಲಭೂತವಾದ ಕೊರತೆ ಯಾವುದು ಇಂದಿನ ಸುಧಾರಕರು ಚಿಂತನೆ ನಡೆಸುವುದು ಅವಶ್ಯ.

ಸನಾತನಿಗಳ ಶಿಥಿಲ ಸ್ಥಿತಿಯನ್ನೂ ಕೂಗಿಹೇಳುವ ಸನ್ನಿವೇಶವಿಂದು ನಿರ್ಮಾಣವಾಗಿದೆ. ಇಂದು ಸವರ್ಣೀಯರೆನಿಸಿದವರು ಸಾಂಸ್ಕೃತಿಕವಾಗಿ ಉತ್ತಮ ಸ್ಥಿತಿಯಲ್ಲಿರುವರೆ ಎಂದು ಸ್ವಲ್ಪ ಯೋಚಿಸಬೇಕಾಗಿದೆ. ಇವರ ಸಾಂಸ್ಕೃತಿಕ ಅಧಃಪತನವೂ ನಮಗೆ ಗೋಚರವಾಗುವುದಾದಲ್ಲಿ ಅದಕ್ಕೆ ಕಾರಣಗಳನ್ನು ಕಂಡುಕೊಂಡು ಈ ಸಾಂಸ್ಕೃತಿಕ ಅಧಃಪಾತದ ಬೇರುಗಳನ್ನು ಅನ್ವೇಷಿಸುವ ಕಾರ್ಯವೂ ನಡೆಯಬೇಕಾಗಿದೆ. ಜತೆಗೆ ಸಾಂಸ್ಕೃತಿಕ ಉತ್ಕ್ರಾಂತಿಯ, ಉತ್ಥಾನದ ಸೋಪಾನಗಳನ್ನೂ ಶೀಘ್ರಾತಿಶೀಘ್ರ ಕಂಡುಕೊಳ್ಳಬೇಕಾಗಿದೆ. ಇಲ್ಲೂ ಸನಾತನವಾದ ಮಾನವಧರ್ಮದ ಅಂತಸ್ಸತ್ವವೇ ಮಾರ್ಗದರ್ಶಿಯಾಗಬೇಕೇ ಹೊರತು ಮತೀಯಕೋನದ ತಾತ್ಕಾಲಿಕ ಕ್ರಮಗಳಲ್ಲ! ದೂರಾತಿದೂರದೃಷ್ಟಿ ಅವಶ್ಯ. ಸೂಕ್ಷ್ಮ

ಗ್ರಾಹಿತ್ವ ಅವಶ್ಯ. ನಡೆಯಬೇಕಾದುದು ಸುಧಾರಣೆಯಲ್ಲ; ಸಾಂಸ್ಕೃತಿಕ ಬೇರುಗಳನ್ನು ಭದ್ರಗೊಳಿಸುವ ಆಂದೋಲನ! ಇಲ್ಲಿ ಸಮಜಾಯಿಷಿಗೆ ಎಡೆಇಲ್ಲ. ಸಮತೋಲದಲ್ಲಿ ಸಾಮರಸ್ಯಕ್ಕೆ ಅವಕಾಶ.

ಆರ್ಥಿಕ ದೃಷ್ಟಿಕೋನವನ್ನು ಸಂಪೂರ್ಣ ಕೈಬಿಟ್ಟು ಆಧ್ಯಾತ್ಮಿಕ ದೃಷ್ಟಿಕೋನವನ್ನೇ ಮುಂದಿಟ್ಟು ಸಾಗಬಲ್ಲ ಸುಧಾರಕರು ಇಂದು ಇದ್ದಾರೆಯೆ? ಇದ್ದಲ್ಲಿ ಅಂಥವರಿಗೆ ಸಾಂಸ್ಕೃತಿಕ ಆಂದೋಲನಕ್ಕೆ ಆಧ್ಯಾತ್ಮಿಕ ಉತ್ಥಾನಕ್ಕೆ ಚಾಲನೆ ನೀಡಲು ಇಂದಿನ ವಿಷಮ ಸ್ಥಿತಿಯಲ್ಲಿ ಆಹ್ವಾನವಿದೆ! ಪಂಥಾಹ್ವಾನವಿದೆ! ಇಂಥ ಒಬ್ಬ ಸತ್ವಶಾಲಿ ಶಕ್ತಿಶಾಲಿ ಮಾನವಶ್ರೇಷ್ಠರನ್ನು ಅನ್ವೇಷಿಸುವ ಪಂಥಾಹ್ವಾನವು ಸನಾತನಿಗಳಿಗಿದೆ! ಮಾನವ ಧರ್ಮಿಗಳಿಗಿದೆ!

**ಉದ್ಧಾರ ಮಾರ್ಗದ ಉತ್ಪಾತ:**

ಜನಾಂಗದ ವಿಭಜನೆಗಾಗಿ ಪೌರೋಹಿತ್ಯ ನಡೆಸಿದವರೇ ವಿಭಜನೆಯ ಕೊನೆಯಲ್ಲಿ ಬರುವ 'ಅಂತ್ಯಜರ ಉದ್ಧಾರ'ದ ಮಂತ್ರೋದ್ಗಾರವನ್ನು ಪ್ರಾರಂಭಿಸಿದರು. ಆಳುವವರ ಮುಂದೆ ಬುದ್ಧಿಜೀವಿಗಳೆನಿಸಿಕೊಂಡವರಿಗೂ, ಜನನಾಯಕರೆನಿಸಬೇಕಾದವರಿಗೂ ಈ 'ಉದ್ಧಾರ'ದ ಮಂತ್ರಘೋಷವನ್ನು ಆಳುವವರ ಮಾತಿನ ಆಳಕ್ಕೆ ಇಳಿಯದೆ ಮಾಡುವುದೇ ಸುಲಭಮಾರ್ಗವೆನಿಸಿರಬೇಕು! ಸರಿ....ಎಲ್ಲೆಡೆಯೂ ಉದ್ಧಾರದ ಹಾಡುಗಳು, ಲಾವಣಿಗಳು, ಪಾಡ್ದನಗಳು, ಶ್ಲೋಕಗಳು, ಪ್ರತಿಯಾಗಿ ಸ್ತೋತ್ರ ಪಠಣಗಳು !

ಈ ಸಂಗೀತಗಳೆಲ್ಲಾ ಸಾಂಗತ್ಯವೆನಿಸಿದವು !
ಆದರೆ ರಾಗ, ತಾಳ, ಲಯಗಳೆಲ್ಲಾ ಅಪಲಾಪವಾಗುತ್ತಿದ್ದವು !
ಇದರ ಶಾಸ್ತ್ರೀಯ ನಡೆ ಯಾರಿಗೂ ಬೇಡವಾಯಿತು !

ಲಾವಣಿಗೆ, ಪಾಡ್ದನಕ್ಕೆ, ಶ್ಲೋಕಕ್ಕೆ, ಸ್ತೋತ್ರಕ್ಕೆ, ಹಾಡುಗಳಿಗೆ ಎಷ್ಟೆಷ್ಟು ದಕ್ಕಿತೋ ಅಷ್ಟಷ್ಟರಲ್ಲೇ ಒಬ್ಬೊಬ್ಬರೂ ತೃಪ್ತಿಪಟ್ಟುಕೊಂಡರು! ಬ್ರಹ್ಮಾನಂದವನ್ನು ಪಡೆದಿರಬೇಕು; ಅಲ್ಲ; ಇಂದಿಗೂ ಪಡೆಯುತ್ತಿರಬಹುದು !

ಆದರೆ ಇಂದು ರಾಗ, ಲಯ, ತಾಳಗಳು ವಿಲಪಿಸುತ್ತಿರುವುದನ್ನು ಕೇಳಲು ಕಿವಿಗಳಿದ್ದರೂ ನಾವು ಕಿವುಡರಾಗುತ್ತಿದ್ದೇವೆ!

'ಯಾರು ಉದ್ಧಾರ'ವಾದರು, ಯಾರು 'ಉದ್ಧಾರ'ವಾಗಿಲ್ಲ ಎಂಬುದರ ಸ್ಪಷ್ಟ ಚಿತ್ರಗಳು ನಮ್ಮ ಎದುರು ಕಾಣಲು ನಮಗೆ ಕಣ್ಣುಗಳಿದ್ದರೂ ನಾವು ಕುರುಡರಾಗುತ್ತಿದ್ದೇವೆ!

ಇದು ಉದ್ಧಾರ ಮಾರ್ಗದ ಉತ್ಪಾತವಲ್ಲವೆ?

ಈ 'ಉತ್ಪಾತ'ವೇಕಾಯಿತು? ನಾವಿಂದು ವಿವೇಚಿಸದೆ ವಿಧಿಯಿಲ್ಲ.

'ಉದ್ಧಾರ'ದ ವಿಧಿವಿಧಾನಗಳೆಲ್ಲಾ ಬರಿಯ ಬಾಹ್ಯಚರ್ಯೆಯಲ್ಲಿ ಮಾತ್ರ ಇದ್ದವು. ಭೌತಿಕವಾಗಿ ಉದ್ಧರಿಸುವ ಸೋಗು ಮಾತ್ರವೇ ಸೊಬಗು ಆಗಿ ನಮಗೆ ಗೋಚರಿಸಿತು. ಎಲ್ಲವನ್ನೂ ಆರ್ಥಿಕ ಮಾನದಿಂದಷ್ಟೇ ಅಳೆಯುವುದನ್ನು ಕಲಿತದ್ದು! ಆಧ್ಯಾತ್ಮಿಕವಾಗಿ, ಆತ್ಮೀಕವಾಗಿ ನಾವು ನಡೆಸಿದ್ದು ಬರಿಯ ಸೊನ್ನೆ. ಅವೆಲ್ಲಾ ಬರೆಯ ಮಾತುಗಳಿಗೇ ಸೀಮಿತ;

ಆಚಾರಕ್ಕಿಲ್ಲ. ನಮ್ಮ ನಡೆಯಲ್ಲಿ ಪರಮಾರ್ಥದ ಲವಲೇಶವಿಲ್ಲ; ನುಡಿಯಲ್ಲಿ ಪುಷ್ಕಳ ಪರಮಾರ್ಥ. 'ಉದ್ಧಾರ' ಹೇಗಾದೀತು? ಆಡಳಿತದ ಸ್ವಾರ್ಥಕ್ಕಾಗಿ ಪೂರ್ಣವೂ ನಿರಾತಂಕವೂ ಆದ ಅವಕಾಶ ದೊರೆಯಿತು. ಬಂದಂಥ 'ಪ್ರಜಾಪ್ರಭುತ್ವ'ದ ದೊರೆಗಳೆಲ್ಲರಿಗೂ ಸುಲಭವಾಗಿ ದೊರೆತ ಉದ್ಧಾರಮಾರ್ಗದ ಈ ತೊರೆಯನ್ನು ಹೇಗೆ ತಾನೇ ಬತ್ತಿಸುವ ಮನಸ್ಸು ಬಂದೀತು? ಈ ಮಧ್ಯೆ ಉದ್ಧಾರವಾಗಬೇಕೆಂದಿದ್ದವರಿಗೂ 'ಆರ್ಥಿಕ'ವೇ ಜೀವನದ ಏಕಮೇವ ಮಾರ್ಗ ಯಾ ಗುರಿಯಾಯಿತು. ಇವರಿಗೆ 'ಆತ್ಮಿಕ' ವಿಚಾರವು ಹರಿದು ಬರಬಹುದಾದ ನಾಲೆಗಳೂ ಭದ್ರವಾಗಿ ಮುಚ್ಚಲ್ಪಟ್ಟವು! ಕೊನೆಗೊಮ್ಮೆ, ಆರ್ಥಿಕ ಆಮಿಷವಾದರೂ ಸರಿ; ಆತ್ಮಿಕ ಚಿಂತನೆಯನ್ನೇ ಮರೆತು ನಾಲೆಗಳ ದ್ವಾರಗಳನ್ನೇ ಕಿತ್ತೆಸೆದು ಪ್ರವಾಹವೇ ಹರಿಯತೊಡಗಿತು.

'ಸುಧಾರಕ'ರೂ ಅನೇಕರು ಹರಿಜನರ ಉದ್ಧಾರಕ್ಕಾಗಿ ತೊಡಗಿದವರಿದ್ದಾರೆ. ಆದರೆ ಇವರದೂ ಪಾರಮಾರ್ಥಿಕ ಯೋಗ್ಯತೆ ಇಲ್ಲದ 'ಉದ್ಧಾರ'ದ ಹಾಡು! ಅದೇ 'ಆರ್ಥಿಕ' ಜಾಡ ! ಇಂಥವರ ಸಾಲುಸಾಲುಗಳನ್ನೇ ಬಡಪಾಯಿ ಜನ ಕಂಡರು. ಸಂಸ್ಕಾರ ಕೊಡಬಲ್ಲವರಾರೂ ಈ ಜನಕ್ಕೆ ದೊರಕಿಲ್ಲ. ಯಾರನ್ನೂ ಮುಟ್ಟಲು ಭಯ ! ಕಾಣಲು ಭಯ ! ಯಾಕೆಂದರೆ, ಸನಿಹ ಬಂದರೆಂದರೆ ಇನರು ಉದ್ಧಾರ ಮಾಡುವವರೆಂಬ ವಿನಯ, ಗೌರವ, ಭೀತಿ, ಭಯ! ಈ ಬಡಪಾಯಿ ಜನರ ಈ ವಿನೀತಭಾವವನ್ನು ಕಂಡು ನಂತರ ಹುಟ್ಟಿಬಂದವರಲ್ಲನೇಕರು 'ಹರಿಜನೋದ್ಧಾರ'ಕ್ಕೆಂದೇ ಅವತಾರ ಪಡೆದವರಂತೆ ನಟಿಸಿದರು. ಆದರೆ, ಎಲ್ಲವೂ ಸ್ವಾರ್ಥಕ್ಕಾಗಿ, ತಮ್ಮದೇ ಪ್ರತಿಷ್ಠೆಗಾಗಿ, ತಮ್ಮದೇ ಕೀರ್ತಿಗಾಗಿ! ಇವರ ಮೇಲಾಟದಲ್ಲಿ 'ಕಾಲಲ್ಲಿ ಗಾಯಗೊಂಡವನು ಕೈಕಾಲುಗಳನ್ನೇ ಕಳೆದುಕೊಳ್ಳುವ ದುರಂತಸ್ಥಿತಿ' !

ಸ್ವಾತಂತ್ರ್ಯೋತ್ತರದ ಈ 34 ವರ್ಷಗಳಲ್ಲಿ ಒಬ್ಬೊಬ್ಬ ಉದ್ಧಾರಕನೂ ಒಂದೆರಡು ಹರಿಜನ ಕುಟುಂಬಗಳನ್ನಾದರೂ 'ಉದ್ಧಾರ' ಮಾಡುತ್ತಿದ್ದರೂ (ಕೊನೆಗೊಮ್ಮೆ 'ದತ್ತು' ಪಡೆದಾದರೂ ಈ ವೇಳೆಗೆ ಅದೆಷ್ಟೋ ಕುಟುಂಬಗಳು ಕೊನೆಯಪಕ್ಷ 'ಆರ್ಥಿಕ'ವಾಗಿಯಾದರೂ, ಉದ್ಧಾರ ಮಾರ್ಗ ಕಾಣುತ್ತಿದ್ದವು! ಯಾವುದೇ (ಪಕ್ಷ ಯಾವುದೇ ಇರಲಿ) ರಾಜಕಾರಣಿ ಈ ಕಾರ್ಯವನ್ನು ಮಾಡಿದ ಚರಿತ್ರೆ ಇದೆಯೆ? ಪ್ರಾಯಶಃ ಗಾಂಧೀಜಿ ಮಾತ್ರವೇ ಹರಿಜನರೊಂದಿಗೆ ಮೇಳಾಮೇಳಿ ಜೀವಿಸಿದ್ದು! ಅಥವಾ, ಯಾವುದೇ 'ಸುಧಾರಕ'ರಾದರೂ ಈ ಕಾರ್ಯವನ್ನು ಮಾಡಿ ತೋರಿಸಿದ್ದರೂ ಕೆಲವರಾದರೂ ಅವರನ್ನು ಅನುಸರಿಸುತ್ತಿದ್ದರು. ಇದನ್ನಾದರೂ ಯಾವುದೇ 'ಸುಧಾರಕ'ರು ಮಾಡಿತೋರಿಸಿದ್ದು ಚರಿತ್ರೆಯಾಗಿದೆಯೆ? ಸಮಾಜ ಸೇವಕರಿಗೂ ಕೊರತೆ ಇರದ ಈ ಬಡ ದೇಶದಲ್ಲಿ 'ಹರಿಜನ' ಕುಟುಂಬ ಒಂದನ್ನಾದರೂ 'ಆರ್ಥಿಕ'ವಾಗಷ್ಟೇ 'ಉದ್ಧಾರ' ಮಾಡಿದ ಬಿಡಿ ಸಂದರ್ಭವಾದರೂ ಇತಿಹಾಸವಾಗಿದೆಯೆ? ಉಳಿದವರಿಗೆ ಮಾರ್ಗದರ್ಶನ ನೀಡಿದೆಯೆ? ಅನೇಕ ಧಾರ್ಮಿಕ ನೇತಾರರೂ 'ಹರಿಜನ'ರ ಮೇಲೆ ಅನುಕಂಪ (ಸಿಂಪತಿ) ತೋರಿದ ಸಂದರ್ಭಗಳಿವೆ. ಯಾವುದೇ ಧಾರ್ಮಿಕ ಕೇಂದ್ರ ಒಂದಾದರೂ 'ಹರಿಜನ' ಕುಟುಂಬವನ್ನು ಉದ್ಧಾರಮಾಡಿ 'ಆರ್ಥಿಕ'ವಾಗಿಯಾದರೂ ಮೇಲೆತ್ತಿದೆಯೆ? 'ಹರಿಜನ' ಕುಟುಂಬಕ್ಕೆ ಸತ್ಸಂಸ್ಕಾರಗಳನ್ನು ಬೋಧಿಸಿ ಆತ್ಮಿಕವಾಗಿಯಾದರೂ ಅವರು ಮೇಲೇರುವಂತೆ ಮಾಡಿದ್ದಾರೆಯೆ ? ಅಂದರೆ, ಅವರ ಧರ್ಮವೂ ಹರಿಜನ ಪಕ್ಷಪಾತಿಯೆ? ಅಂದರೆ, ಬರಿಯ ಮಾತಿನ ಬೊಗಳೆ, ಹೇಳಿಕೆ, ಘೋಷಣೆಗಳಲ್ಲೇ 'ಹರಿಜನೋದ್ಧಾರ'

ಮಾಡಿದ್ದು? ಈ ಒಂದೊಂದೂ ಸಾಂಗೋಪಾಂಗ ನಡೆಯುತ್ತಿದ್ದರೂ ಈ ಹರಿಜನ ಸಮಸ್ಯೆಯು ಅರ್ಧದಷ್ಟು ಆಗಲೇ ಪರಿಹಾರ ಕಾಣುತ್ತಿರಲಿಲ್ಲವೆ? ಎಲ್ಲರೂ ಆತ್ಮಶೋಧ ಮಾಡಿಕೊಳ್ಳಬೇಕಾದ ಘಟ್ಟವನ್ನು ನಾವಿಂದು ತಲಪಿಲ್ಲವೆ?

ಕೆಲವಾದರೂ ಹರಿಜನರು ಇಂದು ಆರ್ಥಿಕವಾಗಿಯಾದರೂ ಮೇಲೆ ಬಂದಿದ್ದಾರಲ್ಲಾ ಇದು ಯಾರಿಂದ ಆದ ಉದ್ಧಾರ ಎಂಬ ಪ್ರಶ್ನೆ ಸಹಜ. ಆದರೆ ಇಂಥ ಸಂದರ್ಭಗಳಲ್ಲಿ ಆಯಾಯ ಹರಿಜನ ಕುಟುಂಬವೇ ಈ ಘೋಷಣೆ, ಹೇಳಿಕೆಗಳನ್ನು ಆತುಕೊಂಡು ಸ್ವಪ್ರಯತ್ನದಿಂದಲೇ ಮೇಲೆ ಬಂದಿರುವುದು ಸತ್ಯ. ಮಾತನ್ನು ಕೃತಿಯಾಗಿಸಲು ಹರಿಜನರೇ ಸ್ವತಃ ಪ್ರಯತ್ನಿಸಿ ಸಂದರ್ಭಗಳನ್ನು ಬಳಸಿಕೊಂಡ ದೃಷ್ಟಾಂತಗಳೇ ಹೇರಳ. ಇವಾವುದೂ ನಮ್ಮ ಕಣ್ಣು ತೆರೆಸದೆ ಉಳಿಯುವುದು ದುರಂತ.

ಇತ್ತೀಚೆಗೆ ರಾಷ್ಟ್ರೀಯ ಮಟ್ಟದಲ್ಲಿ ಗುರುತಿಸಲ್ಪಟ್ಟ ಹರಿಜನ ನೇತಾರರೊಬ್ಬರು ನೀಡಿದ ಹೇಳಿಕೆಯನ್ನು ಎಲ್ಲರೂ ವಿವೇಚಿಸಬೇಕಾಗಿದೆ. ಅವರೆಂದರು: "ಹರಿಜನರನ್ನು ಮಾರಾಟದ ಸರಕುಗಳನ್ನಾಗಿ ಮಾಡಿದಿರಿ" ಎಂದು. ಈ ಹೇಳಿಕೆಯನ್ನು ವಿವೇಚಿಸುವುದು ಭದ್ರಸಮಾಜದ ಕಳಕಳಿಯುಳ್ಳವರ ಆದ್ಯಕರ್ತವ್ಯ. ಇಂದು ಹರಿಜನರೆನಿಸಿಕೊಂಡಿರುವವರ ಸ್ಥಿತಿ ಸನಾತನವಾದ ಮಾನವ ಧರ್ಮದಲ್ಲಿ ಇಷ್ಟು ನಿಕೃಷ್ಟವಾಗಿ ಎಂದೂ ಇದ್ದಿರಲಿಕ್ಕಿಲ್ಲ. ಹಿಂದೂ ಧರ್ಮದಲ್ಲಾದರೂ ಇದು ಈ ಹಂತವನ್ನು ತಲುಪಿದ್ದು ಈ ವರೆಗೆ ಕಂಡುಬರುತ್ತಿಲ್ಲ, ಭೂಮಿಯ ಬೇರೆ ಖಂಡಗಳಲ್ಲಿ ಮಾತ್ರವೇ ಗುಲಾಮಗಿರಿ, ಗುಲಾಮರ ಮಾರಾಟ ಪದ್ಧತಿ ಇದ್ದಂತೆ ಇತಿಹಾಸ ಹೇಳುತ್ತದೆ. ಈ ಇತಿಹಾಸವನ್ನು ನೆನಪಿಸಲೇನೋ ಎಂಬಂತೆ ಆಗುತ್ತಿರುವ ಮತಾಂತರ ಅದರ ಹಿಂದೆ ಆರೋಪಿಸಲ್ಪಟ್ಟಿರುವ ಹಣದ ವ್ಯವಹಾರ ನಿಜಕ್ಕೂ ಬಹಳ ದುರದೃಷ್ಟಕರ! ಇದು ಸಂಸ್ಕೃತಿಯ ಯಾವ ಮಜಲು ಎಂದು ತಿಳಿದುಕೊಳ್ಳುವುದೂ ಕಠಿಣತಮವೆನಿಸುವುದು.

ಇದಲ್ಲವೆ 'ಉದ್ಧಾರ'ದ ಉತ್ಪಾತ?

## ಉದ್ಧಾರದ ಮರಣೋತ್ತರ ಪರೀಕ್ಷೆ?

ಇದೀಗ ಸ್ವಾತಂತ್ರ್ಯೋತ್ತರ ದಿನಗಳು ಕೆಲವೇ ಹರಿಜನರಾದರೂ ಆರ್ಥಿಕವಾಗಿ ಸಾಮಾಜಿಕವಾಗಿ ಉದ್ಧಾರವಾಗಿರಲೇಬೇಕಲ್ಲಾ? ಇದು ನಿತ್ಯಜೀವನದಲ್ಲಾದರೂ ಸತ್ಯವಾಗಿ ಗೋಚರಿಸುತ್ತದೆ. ಇಂಥವರು ತಂತಮ್ಮ ಎಷ್ಟು ಕುಟುಂಬಗಳನ್ನು ಮೇಲಕ್ಕೆತ್ತಿದರು? ಇಂಥವರು ತಮ್ಮ ಮಾತೃಸಮುದಾಯಕ್ಕೆ ಪ್ರತಿಯಾಗಿ ನೀಡಿದ ಆಸರೆ ಎಷ್ಟು? ಅಥವಾ, ಮಾತೃಸಮುದಾಯವು ಇಂಥವರಿಂದ ಪಡೆದ ಒದೆತ ಎಷ್ಟು? ಈ ಅಂಶವೂ ಗಮನಾರ್ಹವೇ ಸರಿ. ಒಂದು ವೇಳೆ ಇಂಥವರಿಂದ ತಮ್ಮ ಬಳಗದವರ ಆರೋಹಣಕ್ಕೆ ಎಡೆಯಾಗಿದ್ದಲ್ಲಿ ಇದು ನಿಜಕ್ಕೂ ಆಶಾದಾಯಕವೇ ಎನ್ನಬೇಕು. ಇದಾಗಿಲ್ಲವಾದಲ್ಲಿ ಇಂಥವರ ಕುಸಂಸ್ಕೃತಿಗೂ ಇವರು ಉದ್ಧಾರಗೊಂಡ ಆರ್ಥಿಕ ಮಾರ್ಗಕ್ಕೂ ಸಮನ್ವಯವನ್ನು ಎಲ್ಲಿ ಹುಡುಕುವುದು? ಅದೇ ವೇಳೆಗೆ ಆಗಲೇ ನಿರ್ಲಕ್ಷಿಸಲ್ಪಟ್ಟವರು ತಮ್ಮವರಿಂದಲೂ ನಿರ್ಲಕ್ಷಿಸಲ್ಪಟ್ಟಿರುವರೆಂದಾದಲ್ಲಿ ಎಂಥ ನಿರ್ಲಜ್ಜ ಸಂಸ್ಕೃತಿ ಇಂಥವರಲ್ಲಾದರೂ ಇದೆ ಎಂದು ಮನಗಾಣಬಹುದು. ಅಂತೂ

ಆಶಾದಾಯಕವಲ್ಲದ ಪರಿಸ್ಥಿತಿಯೊಂದು ಈ ಜನಸಮುದಾಯದಲ್ಲಿರುವುದು ಹೆಚ್ಚು ಹೆಚ್ಚು ವಿದಿತವಾಗುತ್ತಿದೆ.

ಇದು ಕುಸಂಸ್ಕೃತಿಯ ಇನ್ನೊಂದು ಮುಖ!

**ಬಹಿರ್ದೃಷ್ಟ ಮನೋಧರ್ಮ:**

ನಮ್ಮ ಜನಾಂಗದ ಚಾರಿತ್ರಿಕ ಹಿನ್ನೆಲೆಯಲ್ಲಿ ಒಂದು ವಿಚಿತ್ರವಾದ ಮನೋಧರ್ಮ ಬೆಳೆದುಬಂತು. ಅದುವೇ ಬಹಿರ್ದೃಷ್ಟ ಮನೋಧರ್ಮ. ನಮ್ಮ ದೃಷ್ಟಿ ಸದಾ 'ಅವನು' 'ಇವನ'ನ್ನು ನೋಡಿ ಅನುಕರಿಸುವಷ್ಟರಲ್ಲಿಯೇ ಸೀಮಿತಗೊಂಡಿತು. ಸಮಾಜದ ಯಾವುದೇ ಸಮಸ್ಯೆಗೂ ಒಬ್ಬರನ್ನೊಬ್ಬರು ದೋಷಾರೋಪಣೆ ಮಾಡುವಷ್ಟರಲ್ಲಿಯೇ ವಿಶ್ಲೇಷಣೆ ಸಾಗಿತೇ ಹೊರತು ಸಮಸ್ಯೆಗೆ ಪರಿಹಾರ ಕಂಡುಕೊಳ್ಳುವಲ್ಲಿ ಗಮನಾರ್ಹ ಮಾರ್ಗವನ್ನು ಈ ಮನೋಧರ್ಮವು ಸ್ಪಷ್ಟವಾಗಿ ಪ್ರಕಟಗೊಳ್ಳಲಿಲ್ಲ. ಸಮಷ್ಟಿಯತ್ತ ದೃಷ್ಟಿ ಹಾಯಲಿಲ್ಲ. ವ್ಯಷ್ಟಿಯ ಸ್ವಾರ್ಥವೇ ಮೇಲಾಯಿತು; ಸೃಷ್ಟಿಯ ನಿಯಮಗಳಾವುವೂ ಯಾರಿಗೂ ಬೇಡವಾಯಿತು. ಸಮಸ್ಯೆಗಳು ಅಪರಿಹಾರ್ಯವೇನೋ ಎಂಬಂತೆ ಉಳಿಯುತ್ತಿದ್ದಂತೆ ಕಾಲಕಾಲಕ್ಕೆ "ಸುಧಾರಣೆ"ಯ ಲೇಪ ತಿಕ್ಕುತ್ತಾ ಒಂದು ತೆರವಾದ ಸಮಜಾಯಿಷಿಯ ಮಾರ್ಗವೇ ಋಜುಮಾರ್ಗವೇನೋ ಎನ್ನುವ ಭ್ರಮೆಗೆ ಎಡೆಕೊಟ್ಟಿತು. ಇದರಿಂದ ಆಧ್ಯಾತ್ಮಿಕ ಪ್ರಗತಿಯ ಕೊರತೆ ಕಂಡು ಬಂದುದು ಮಾತ್ರವಲ್ಲ, ಆಧ್ಯಾತ್ಮಿಕಭಾವ ತೋರಿಬಂದಲ್ಲೂ ದ್ವಂದ್ವಕ್ಕೆ ಹೆಚ್ಚಿನ ಪ್ರಾಶಸ್ತ್ಯ ದೊರಕುತ್ತಾ ಬಂತು. ಹಿಪಾಕ್ರಸಿಯ ಬೆಳೆಗೆ ಒಳ್ಳೆಯ ಪೂರಕಸ್ಥಿತಿ! ಸಾಚಾತನ-ಸರಳತೆಗಿಂತ ಬಾಹ್ಯಾಡಂಬರ–ಬಡಾಯಿಗೇ ಹೆಚ್ಚಿನ ಬೆಲೆ ದೊರಕಿತು. ಆಷಾಢಭೂತಿತನದ ಕೃಷಿಗೆ ಪುಷ್ಕಳ ಸಾರ ಒದಗಿಸಿದ ಸ್ಥಿತಿ! ಇದರಿಂದಾಗಿ, ಶಿಥಿಲಗೊಂಡ ಸನಾತನವಾದ ಮಾನವಧರ್ಮದ ಸಾರಸತ್ತ್ವವು ಇಂದು ನಮ್ಮೆಲ್ಲ ಪ್ರಕ್ರಿಯೆಗಳನ್ನೂ ಮೂಗಿನ ನೇರಕ್ಕೇ ಕೊಯ್ಯುತ್ತಿದೆ. ಈ ತೊಯ್ತದಲ್ಲಿ ನಾವು ಸಂಸ್ಕೃತಿಹೀನರಾಗಿ ಚರಿತ್ರಹೀನರಾಗಿ ಸಾಗುತ್ತಿರುವುದು ಗೋಚರಿಸಿದರೂ ಮುಚ್ಚಿಕೊಳ್ಳುವ ಯತ್ನ ನಿರಂತರವಾಗುತ್ತಿದೆ!

ಗಲಿಬಿಲಿಯ, ಆದರೆ ದೌಡಾಯಿಸುತ್ತಿರುವ ಇಂದಿನ ದಿನಗಳಲ್ಲಿ, ಕಾಲಧರ್ಮದಲ್ಲಿ, ನಾವು ನಮ್ಮೊಳಗೆ ನೋಡಿಕೊಳ್ಳಲು ಬಿಡುವಿಲ್ಲವಾಗಿದೆ. ಒಂದು ವೇಳೆ ನಮ್ಮೊಳಗೆ ನೋಡಿಕೊಳ್ಳೋಣವೆಂದರೂ ಆ ಅಸಹನೀಯ ಬಿಗಿತಗಳಿಂದ ಬಿಡುಗಡೆಗೊಳಿಸಬಲ್ಲ ಆತ್ಮದ ಬೆಳಕು ನಮ್ಮೊಳಗೆ ಮೂಡುವುದಿಲ್ಲ. ಆ ಜ್ಯೋತಿಯನ್ನು ಕುದುರಿಸಬೇಕಾದವರಾರು? ಆಡಳಿತವಲ್ಲಿರುವವರಾಗಲೀ, 'ಸುಧಾರಕ'ರಾಗಲೀ ಇದನ್ನು ಮಾಡಲಾರದವರಾಗಿದ್ದಾರೆ. ಈ ವಿದ್ಯೆಗೆ ನಮ್ಮವರು ಮಾರ್ಗದರ್ಶಕರಾಗಿ ನಿಲ್ಲಲಾರದವರಾಗಿದ್ದಾರೆ. ಕಾರಣ—ನಮ್ಮ ದ್ವಂದ್ವಗಳು ಅವರದೇ ದ್ವಂದ್ವಗಳ ಪ್ರತಿಬಿಂಬ. ಅಂತೆಯೇ ಅವರ ದ್ವಂದ್ವಗಳು ನಮಗೆ ಪಾರದರ್ಶಕವಾಗಿ ಗೋಚರಿಸುತ್ತಿರುವುದೂ ಸತ್ಯ. ಬರಿಯ ಭೌತಿಕ ಪ್ರತಿಫಲಕ್ಕಾಗಿಯಷ್ಟೇ ಅವರು ಇಂದು ನಮ್ಮ ಮಾರ್ಗದರ್ಶಕರು! ಮನಸ್ಸಿನ ಒಳಕತ್ತಲೆಗೆ ಬೆಳಕು ತುಂಬೋಣವೆಂದರೆ 'ಮತ'ಗಳ ದಟ್ಟ ಅರಣ್ಯದಲ್ಲಿ ಧರ್ಮವಾವುದು ಮತವಾವುದು ಎಂಬ ವಿಭ್ರಮೆ. ಕೊನೆಗೆ ಇವರೆಲ್ಲರೂ ಏನೋ ಭ್ರಮಾಧೀನರೆಂಬ ಭಾವ ನಮ್ಮಲ್ಲಿ ಮೂಡಿ ಆಸ್ತಿಕ್ಯದಿಂದ ನಾಸ್ತಿಕ್ಯಕ್ಕೆ ಹೊರಳಿದರೂ ಅಚ್ಚರಿಯಿಲ್ಲ.

ಇಂಥ ಒಂದು ಬಹಿರ್ದೃಷ್ಟ ಮನೋಧರ್ಮದಲ್ಲಿ ಪರರನ್ನು ನಾವು ಕಾಣುವಾಗ ನಮ್ಮದೇ ಆದ ಚಷ್ಮವನ್ನು ಇಟ್ಟುಕೊಳ್ಳುತ್ತೇವೆಯೋ ಎಂಬಂತಿದೆ. ಹೀಗಾಗಿ ಯಾವುದಕ್ಕೂ ಸಾಂಗತ್ಯ ಕಾಣದೆ ಬರಿಯ ಯಾಂತ್ರಿಕವಾದ ಪ್ರಕ್ರಿಯೆಯಲ್ಲಿಯೇ ತೊಡಗುತ್ತೇವೆ. ಯಂತ್ರ ಯುಗದ್ದೇ ಸಾರ್ಥಕ ಜೀವನವೆಂದು ನಮ್ಮನ್ನು ನಾವು ಮರೆಯುತ್ತೇವೆ.

ಈ ಕತ್ತಲೆಯಲ್ಲಿ–ಜೀವಜೀವದ ಬಂಧ, ಆತ್ಮನ ಉದ್ಧಾರದ ಮಾರ್ಗ, ಸಂಸ್ಕೃತಿಯು ಬದುಕನ್ನು ರೂಪಿಸಬಹುದಾದ ರೀತಿ–ಇವೆಲ್ಲವನ್ನೂ ನಾವು ಸಂಪೂರ್ಣವಾಗಿ ಮರೆಯುತ್ತಾ ಸಾಗುತ್ತಿರುವುದು ಇಂದು ಸರ್ವವೇದ್ಯವಾಗುತ್ತಿದೆ. ಹೀಗಿರುವಲ್ಲಿ, ಜಾತಿ–ರೀತಿ–ನೀತಿ–ಧರ್ಮ–ಮತ ಇವೆಲ್ಲ ಎಷ್ಟರದು; ಎಲ್ಲವನ್ನು ಮೀರಿ ಇವೆಲ್ಲಕ್ಕೂ ಅತೀತರಾಗಿ ಬದುಕುವ ನಮ್ಮ ಜೀವನ ಬರಡಾಗುತ್ತಿರುವುದು ನಮ್ಮ ಮನದಾಳಕ್ಕೆ ಬರಲಾರದು!

ಎಷ್ಟು ಬೇಗ ನಮ್ಮ ಮನೋಧರ್ಮವನ್ನು ಅಂತರ್ದೃಷ್ಟಗೊಳಿಸುತ್ತೇವೋ ಅಷ್ಟು ಬೇಗ ನಮ್ಮ ಸಮಸ್ಯೆಗಳು ಒಂದೊಂದಾಗಿ ಪದರಪದರವಾಗಿ ನಮ್ಮಿಂದ ವಿರಸಗೊಂಡಾವು; ವಿದಾಯ ಪಡೆದಾವು. ನಮ್ಮ ಅಂತರ್ಮುಖ ಆತ್ಮಶೋಧ ಆಳ ನಿರಾಳಕ್ಕೆ ಇಳಿದಂತೆ ಸಮಸ್ಯೆಗಳಿಗೂ ದೀರ್ಘಕಾಲೀನ ಪರಿಹಾರವು ಗೋಚರವಾಗದಿರದು. ಮತ್ತೊಮ್ಮೆ ಸಾಂಸ್ಕೃತಿಕ ಮಜಲನ್ನು ನಮ್ಮದಾಗಿಸಿಕೊಳ್ಳುವ ಮುತುವರ್ಜಿಯು ಆಗ ನಮ್ಮಲ್ಲಿ ಮೂಡದಿರದು. ದೀರ್ಘಕಾಲೀನ ದೃಷ್ಟಿಯಲ್ಲಿ ನಮ್ಮನ್ನು ಉಳಿಸಿಕೊಳ್ಳುವ ಕ್ರಮವಿದೆಂದು ನಮಗೆ ಗೋಚರವಾಗದಿರದು.

**ಉದ್ಧಾರದ ಸಾರೋದ್ಧಾರ:—**

ಉದ್ಧಾರದ ಹಾಡು ಎಲ್ಲರೂ ಕೇಳಿ ಕೇಳಿ ಮನತುಂಬಿಕೊಂಡಂತಾಯಿತು. ಅದು ಎಷ್ಟರಮಟ್ಟಿನ 'ಉದ್ಧಾರ' ಸಾಧ್ಯವೆಂಬುದು ಮನದಟ್ಟಾಗಿರಬೇಕು–ಇಷ್ಟರಲ್ಲಿ! ಬರಿಯ ಬಾಹ್ಯ ಸವಲತ್ತುಗಳಿಂದ 'ಉದ್ಧಾರ' ಖಂಡಿತಾ ಅಸಾಧ್ಯ, ಇದು ಅನೇಕರಿಗೆ ಅನುಭವ ಸತ್ಯವಾಗಿರಬೇಕು. ಆಗಿಲ್ಲವಾದಲ್ಲಿ ಇದು ಅನುಭವಸತ್ಯವಾಗಬೇಕಾದುದೂ ಖಚಿತ. ಮನೆ ತುಂಬುವ ಮಡದಿ ಎಷ್ಟೇ ಆದರೂ ಮನತುಂಬದಿದ್ದರೆ ಮನೆಯ ಯಜಮಾನನಿಗೆ ಶಾಂತಿ ಅಸಾಧ್ಯ. 'ಶಾಂತಿ ಇರುವುದು, ಅಶಾಂತಿ ನೆಲೆಸುವುದು ಮನಸ್ಸಿನಲ್ಲಿ' ಎಂಬುದು ಎಷ್ಟೇ ವೇದಾಂತವೆಂದು ಕಾಣಲಿ, ಮನಶ್ಶಾಸ್ತ್ರವೆಂದು ಕಾಣಲಿ, ಇದನ್ನು ಇರಿಸುವುದಾಗಲೀ ತೆಗೆಸುವುದಾಗಲೀ ಬಾಹ್ಯಸವಲತ್ತುಗಳಿಂದ ಸಾಧ್ಯವಾಗದು. ಶ್ರೀಮಂತರನೇಕರು ಸವಲತ್ತುಗಳೆಲ್ಲ ಇದ್ದಾಗ್ಯೂ ಆತ್ಮಹತ್ಯೆಯಂಥ ಹೇಯ ಹೇಡಿಕೃತ್ಯಕ್ಕೆ ಇಳಿಯುವುದು ಇದಕ್ಕೊಂದು ನಿದರ್ಶನ. ಹಳ್ಳಿಯ ಮೂಲೆಯಲ್ಲಿರುವ ನಾಗರಿಕ ಜೀವನದ ಲೇಪ ತಗಲದ, ಶತಮಾನೋತ್ಸವದ ಸಿದ್ಧತೆಯಲ್ಲಿರುವ, ಸುಕ್ಕು ಚರ್ಮದ ಅಜ್ಜ ತನ್ನ ಮಗಳು, ಮೊಮ್ಮಗಳು, ಮರಿಮಕ್ಕಳುಗಳ ಜತೆ ಸಂತೃಪ್ತವಾದ ಜೀವನ ನಡೆಸುತ್ತಾ, ಶಾಂತಿಪಾಠವನ್ನು ಅನುಗಾಲವೂ ತನ್ನ ಉಸಿರು ಉಸಿರಿನಲ್ಲಿ ಹೊರಕ್ಕೆ ವಿಸರಿಸುತ್ತಿರುತ್ತಾನೆ. ಆತನ ಬಾಹ್ಯ ಸವಲತ್ತುಗಳನ್ನು ಪಟ್ಟಿ ಮಾಡಬೇಕಾದ ಪ್ರಮೇಯವೇ ಇಲ್ಲ; ಯಾಕೆಂದರೆ, ಅದಾವುದೂ ಅಲ್ಲಿ ಇಲ್ಲ. ಆದರೂ ತನ್ನ ಆತ್ಮೋದ್ಧಾರವಾಗಿರುವಂತೆ ತೋರುವ ಆ ಅಜ್ಜನಲ್ಲಿ ಶಾಂತಿ ನೆಲೆಸಿರುವಂತೆ ಕಾಣುವುದು ಆತನ ಬುದ್ಧಿಯ ಪ್ರಮಾದವೇನೂ ಅಲ್ಲವಷ್ಟೆ? ಆದರೆ, ಉದ್ಧಾರವಾಗಬೇಕಾದವರು

ಎಲ್ಲರೂ........ಎಲ್ಲ ಕಾಲಕ್ಕೂ........ ಆತ್ಮದ ಪ್ರಜ್ಞೆಯಲ್ಲಿ, ಇದನ್ನು ಸಾಧಿಸಿಪಡೆಯಬೇಕೇ ಹೊರತು ಇನ್ನೊಬ್ಬನಿಂದ ಇದಲ್ಲಿ ಸಾಧ್ಯವಾಗಿಸುವುದು ಅಸಾಧ್ಯ. ಸಾಧ್ಯವಾಗಿಸಹೊರಟ ವನಿಗಷ್ಟೇ ಇದು ಸಾಧ್ಯವಾದೀತು. ನಮಗೆ ಬೇಕಾದಲ್ಲಿ ನಾವೇ ಸಾಧಿಸಹೊರಡಬೇಕು. ಇದು ಆರ್ಥಿಕವಾಗಿಯೂ ಆತ್ಮಿಕವಾಗಿಯೂ ಅನುಭವಸತ್ಯ. ಇದುವೇ ಉದ್ಧಾರದ ಮೂಲಸಾರ!

ಈ ಸಾರವನ್ನು ಹೀರಲು ಬೇಕಾದ ಸಂಸ್ಕಾರಗಳನ್ನು ಇತರರು ಒದಗಿಸಬಹುದು. ಅಷ್ಟೆ! ಇದುವೇ ಉದ್ಧಾರದ ಏಕಮೇವಮಾರ್ಗ! ಈ ಸಂಸ್ಕಾರವನ್ನು ನೀಡುವಲ್ಲಿ ನಿಸ್ಪೃಷ್ಟ ವಾದ ಸೋಪಾನಗಳಿವೆ! ಆ ದಾರಿಯಲ್ಲಿಯೇ ಎಲ್ಲರೂ ಸಾಗಬೇಕಾಗುವುದು. ಇದು ನಿಧಾನವಾದ ಕ್ರಿಯೆಯಾದರೂ ಬಹಳ ನಿಖರವಾದ ಕ್ರಿಯೆ. ಈ ಸಂಸ್ಕಾರಗಳನ್ನು ನೀಡುವ ಕಾರ್ಯಗಳನ್ನು ಸಂಘಗಳು, ಸಂಸ್ಥೆಗಳು, ವ್ಯಕ್ತಿಗಳು, ಪತ್ರಿಕೆಗಳು ಅವರವರ ಯೋಗ್ಯ ತಾನುಸಾರ ಮಾಡಬಹುದು. ಇದುವೇ ಮಾಡಬೇಕಾದ ಮಹಾಕಾರ್ಯ. ಇದು ವರ್ಗವರ್ಗ ಗಳಲ್ಲೂ ನಿರಪೇಕ್ಷವಾಗಿರಬೇಕು.

ಪಾಠ ಹೇಳುವ ಶಿಕ್ಷಕ ಹೇಗೆ 1ನೇ ವರ್ಗ, 8ನೇ ವರ್ಗ, 10ನೇ ವರ್ಗ ಎಂಬ ಬಗ್ಗೆ ನಿರಪೇಕ್ಷನಾಗಿರುತ್ತಾನೋ ಹಾಗೆಯೇ ಸಂಸ್ಕಾರ ನೀಡುವವರೂ ಸಮಾಜದ ವರ್ಗವರ್ಗ ಗಳ ಬಗ್ಗೆ ನಿರಪೇಕ್ಷವಾಗಿರಬೇಕು. ಇಂಥ ಸಮಾಜ ನಿರ್ಮಾಣವಾಗಿದೆಯೇ ಇಂದು? ಸಂಸ್ಕೃತಿಉಳ್ಳವರು, ಸುಸಂಸ್ಕೃತರೆನಿಸಿಕೊಂಡವರು ಈ ಕಾರ್ಯದಲ್ಲಿ ತೊಡಗುವುದು ಇಂದಿನ ತುರ್ತು ಆವಶ್ಯಕತೆಯಲ್ಲವೆ? ಇಂಥ ಸಮಾಜದಲ್ಲಿ ವರ್ಗಭೇದ ಎಲ್ಲಿಯದು? ಇಂಥ ಹಂದರ ದೊಳಗೆ ಯಾರಿಗೆ ತಾನೇ ಉದ್ಧಾರಗೊಳ್ಳುವ ಬಯಕೆ ಮೂಡದಿದ್ದೀತು? ಇಲ್ಲಿಂದ ಉದ್ಧಾರದ ಸಾರೋದ್ಧಾರವಾಗಬೇಕು.

ಸ್ವಾತಂತ್ರ್ಯೋತ್ತರದ ಈ ಮೂರು ದಶಕಗಳಲ್ಲಿ ಇದು ಸಾಧ್ಯವಾಗಿರಬೇಕಾಗಿತ್ತು. ಆಗಿರುತ್ತಿದ್ದಲ್ಲಿ ಇಂದು ನಮ್ಮ ಸಮಾಜದ, ದೇಶದ ಸ್ಥಿತಿ ಹೇಗಿರುತ್ತಿತ್ತು? ಇಂದಿನ ನೈತಿಕ ಅಧಃಪತನವಾಗಲೀ, 'ಅಂತರ್'ಲಾಗಗಳಾಗಲೀ, ಸ್ವಪ್ರಭೇದವನ್ನೇ ನಾಶಮಾಡುವ ಬುದ್ಧಿ ಯನ್ನಾಗಲೀ (ಭ್ರೂಣಹತ್ಯೆ ಒಂದು ಉದಾಹರಣೆ) ಕಾಣುವ ದೌರ್ಭಾಗ್ಯ ನಮ್ಮದಾಗುತ್ತಿರ ಲಿಲ್ಲ. ಇನ್ನಾದರೂ ಆರ್ಥಿಕ ವಿಭ್ರಮೆಯಿಂದ ಹೊರಬಂದು ಆತ್ಮಿಕವಿಜಯದ ದ್ವಾರವನ್ನಾ ದರೂ ಪ್ರವೇಶಿಸಬೇಡವೆ? ಪ್ರಾಜ್ಞರು ವಿಚಾರಶೀಲರು ಈ ಕುರಿತು ಚಿಂತನೆ ನಡೆಸಬೇಕಾ ದುದು ಅವಶ್ಯ.

ಒಂದು ಪಕ್ಷ ಸಮಾಜಕ್ಕೆ 'ಸಂಖ್ಯೆ' ಮುಖ್ಯವೋ 'ಸಂಸ್ಕಾರ' ಮುಖ್ಯವೊ ಎಂಬುದು ನಮ್ಮ ಇಂದಿನ ಸಮಸ್ಯೆಯು ಇನ್ನೊಂದು ಮಗ್ಗುಲಿಗೆ ಹೊರಳಿಕೊಂಡಾಗ ತಟ್ಟುವ ಚಿಂತನೆ. ನಮ್ಮ ಇಂದಿನ ಚರ್ಚೆಗಳೆಲ್ಲ 'ಸಂಖ್ಯೆ' ಕಡೆಗೇ ಇದೆಯೇನೋ ಅಂತನಿಸುತ್ತದೆ. 'ಹಿಂದಿನ' ಪ್ರಜ್ಞೆಯಲ್ಲೇ ನಾವೆಲ್ಲಾ ಮಿಳಿತವಾಗುತ್ತಿದ್ದೇವೋ ಅಂತನಿಸುತ್ತದೆ. 'ಸಂಖ್ಯೆ' ಯನ್ನನ್ನು ಇಳಿಸುವ ಸಲುವಾಗಿ 'ಭ್ರೂಹತ್ಯೆ'ಯಂತಹ ಸ್ವಪ್ರಭೇದನಾಶಕವಾದ ತೀವ್ರತರ ಹಿಂಸಾತ್ಮಕ ಕ್ರಿಯೆಯೂ 'ಕಾನೂನು' ಸಮ್ಮತಿಯನ್ನು ಪಡೆಯುವ ವೇಳೆ ನಾವು ಬರಿಯ 'ಹಿಂಡಿ'ನ ಸದಸ್ಯರಾಗಷ್ಟೇ ಉಳಿದೆವು. ಯಾವುದೇ ಜೀವರಾಶಿಯಲ್ಲೂ ಕಾಣಸಿಗದ ಸ್ವಪ್ರ

ಭೇದನಾಶಕ ಹತ್ಯಾಕಾಂಡಕ್ಕೂ ಒಪ್ಪಿಗೆ ಸೂಚಿಸುವಾಗಲೂ 'ಸಂಸ್ಕೃತಿ' ಅಂಶ ಲೇಶಮಾತ್ರವೂ ಎಚ್ಚರಗೊಳ್ಳಲಿಲ್ಲ! 'ಸಂಸ್ಕೃತಿ' ಮಾತ್ರದಿಂದಲೂ 'ಸಂಖ್ಯಾ' ಹತ್ತೋಟಿ ಸಾಧ್ಯವೆಂಬುದನ್ನು ವೈಜ್ಞಾನಿಕವಾಗಿ ನಾವು ಯಾವಾಗಲೂ ಬೊಗಳೆಹಾಕಿಕೊಳ್ಳುತ್ತಿರುವ ಸನಾತನವಾದ ಮಾನವಧರ್ಮವೇ ತೋರಿದ್ದರೂ ನಮ್ಮಲ್ಲಿ ಅಂದು ದೃಢವಿಶ್ವಾಸವನ್ನು ಹುಟ್ಟಿಸಲಿಲ್ಲ! ಈ ಧರ್ಮೋದ್ಧಾರಕ್ಕಾಗಿ ಹೊರಟ 'ಸುಧಾರಕ'ರಿಗಾದರೂ ಈ ಘೋರ ಹತ್ಯಾಕಾಂಡವನ್ನು ಖಂಡಿಸುವಷ್ಟು ಸಾಂಸ್ಕೃತಿಕ ಜಾಗೃತಿ ನಷ್ಟವಾದುದು ಮಾನವ ಜನಾಂಗದ ದುರಂತವಲ್ಲವೇ? ಸಂಸ್ಕಾರವಿಲ್ಲದ ಸಂಖ್ಯೆ ಇದ್ದರೆಷ್ಟು ಇಲ್ಲದಿದ್ದರೆಷ್ಟು! ಸಂಸ್ಕಾರವಿಲ್ಲದೆ ಯಾವ ಸಂಖ್ಯೆಯೂ ಶಕ್ತ ಸಮಾಜಕ್ಕೆ ನಗಣ್ಯವೇ ಸರಿ. ಸಂಸ್ಕಾರವಿರುವ ಏಕಸಂಖ್ಯೆಯ ಕೊರತೆಯೂ ಶಕ್ತ ಸಮಾಜಕ್ಕೆ ಭಾರೀಕೊರತೆ, ತುಂಬಲಾರದ ನಷ್ಟ! ಭಾರತದ ಸನಾತನವಾದ ಪುರಾತನವಾದ 'ಹಿಂದಿ'ನ ಪ್ರಜ್ಞೆ ಇದು; 'ಹಿಂದಿ'ನ ಪ್ರಜ್ಞೆ ಭಾರತದ ಮಣ್ಣಿಗೆ ಕೊಂಡಿದ್ದದ್ದಲ್ಲ!

ಆದುದರಿಂದಲೇ ಮೊದಲೇ ಹೇಳಿದ್ದು–ಸಂಸ್ಕೃತಿ ಬದುಕಿನ ಆಶ್ರಯವಿಲ್ಲದೆ ತಂತಾನೇ ನಿರಪೇಕ್ಷವಾಗಿರಬಲ್ಲುದು ಎಂದು;–ಬದುಕು ಸಂಸ್ಕೃತಿಯನ್ನು ಆಶ್ರಯಿಸಿದಲ್ಲಿ ಆ ಬದುಕು ಸಾಪೇಕ್ಷವೂ ಸಾರಪೂರ್ಣವೂ ಆಗಿರುವುದು ಎಂದು. ಅಂದರೆ ಇಂದು ಎಲ್ಲರಿಗೂ ಉತ್ತಮ ಸಂಸ್ಕೃತಿಯನ್ನು ನಿರಪೇಕ್ಷವಾಗಿ ಉಣಿಸುವ ಮಹಾಯಜ್ಞಕ್ಕೆ ಸುಸಂಸ್ಕೃತರೆನಿಸಿಕೊಂಡವರು ಸುಧಾರಕರೆನಿಸಿಕೊಂಡವರು ತೊಡಗಬೇಕಾದ ಕಾಲದ ಗಂಟೆ ಬಾರಿಸುತ್ತಿದೆ.

ಉದ್ಧಾರ ಸಾರೋದ್ಧಾರವಾಗಬೇಕು; ಸಕಲೋದ್ಧಾರವಾಗಬೇಕು, 'ಸರ್ವೇಜನಾಃ ಸುಖಿನೋ ಭವಂತು' ಈ ಸುಖವೂ ಆತ್ಮನ ಸುಖ, ಆರ್ಥಿಕ ಸುಖವಲ್ಲ! ಉದ್ಧಾರದ ಸಾರೋದ್ಧಾರ ಇಲ್ಲಿದೆ! ನಾವಿಂದು ಯಾರನ್ನು 'ಅಸ್ಪೃಶ್ಯ'ರೆಂದು ಬೇರೆ ಇರಿಸಿದ್ದೇವೋ ಅವರಲ್ಲಿ ಸತ್ಸಂಸ್ಕಾರಗಳನ್ನು ತುಂಬುವ, ಅವರಲ್ಲೂ ಪ್ರಕೃತಿಸ್ಥವಾಗಿರುವ ಮಾನವಸಂಸ್ಕೃತಿಯನ್ನು ಸೆಡಿಸುವ ಕಾರ್ಯವಿಂದು ಅವಶ್ಯವಾಗಿ ಆಗಬೇಕಾಗಿದೆ! ಇವರಿಗೆ ತೊಡಿಸಿರುವ ಈ ಕರಾಳಫಲದ ಉತ್ಪಾಟನೆ ಮಾಡಿ ಉಚ್ಚ ಮಾನವ ಸಂಸ್ಕೃತಿಯ ಸ್ನಾನದಿಂದ ಅವರ ಶುದ್ಧೀಕರಣಮಾಡಿ ಅವರಲ್ಲಿ ಸತ್ಸಂಸ್ಕಾರದ ವೃಕ್ಷಗಳನ್ನು ನಿಲುಕದ ಆಳದ ಬೇರುಗಳಿಂದ ಬೆಳೆಸಬೇಕಾಗಿದೆ. ಈ ಮಹಾಕಾರ್ಯಕ್ಕೆ ಇಂದು ಯಾರು ಸಿದ್ಧರಿದ್ದಾರೆ ಅವರೇ ಸುಸಂಸ್ಕೃತರು. ಇದುವೇ ಉದ್ಧಾರದ ಸಾರೋದ್ಧಾರ! [ಕ್ರಮಶಃ]

---

# ಪಿಂಡ ಪ್ರದಾನ ಅಥವಾ ಪಿತೃಪಕ್ಷದ ವೈಚಾರಿಕ ಹಿನ್ನೆಲೆ

● ಸ್ವಾಮೀ ವಿವೇಕಾನಂದ ಸರಸ್ವತೀ

ಭಾರತೀಯ ಪಂಚಾಂಗಗಳಲ್ಲಿ ಮಾಸ (ತಿಂಗಳು) ದಲ್ಲಿ ಎರಡು ಪಕ್ಷಗಳಿವೆ. ಒಂದು ರಾತ್ರಿಯ ಸಮಯದಲ್ಲಿ ಅಂಧಕಾರ ವ್ಯಾಪಿಸಿರುವ ಕೃಷ್ಣ ಪಕ್ಷ, ಇನ್ನೊಂದು ಬೆಳಕನ್ನು ಹೊಂದಿರುವ ಶುಕ್ಲ ಪಕ್ಷ. ಪ್ರತಿಯೊಂದು ಪಕ್ಷವೂ ಸಾಧಾರಣವಾಗಿ ಹದಿನೈದು ದಿನಗಳನ್ನು ಹೊಂದಿರುತ್ತವೆ. ಎರಡೂ ಪಕ್ಷ ಸೇರಿಸಿ ಸಾಧಾರಣವಾಗಿ ೩೦ ದಿನಗಳ ಒಂದು ಮಾಸ

ವಾಗುತ್ತದೆ. ಅನೇಕ ಸಂದರ್ಭಗಳಲ್ಲಿ ತಿಥಿಗಳ ವ್ಯತ್ಯಾಸದಿಂದಾಗಿ ನ್ಯೂನಾಧಿಕ ದಿನಗಳ ಒಂದು ಮಾಸವೂ ಆಗುತ್ತದೆ. ಭಾದ್ರಪದ ಮಾಸವೂ ಇಂಥ ಮಾಸಗಳಲ್ಲೊಂದು. ಈ ಭಾದ್ರಪದ ಮಾಸದ ಕೃಷ್ಣ ಪಕ್ಷವನ್ನು ಪಿತೃಪಕ್ಷವೆಂದು ಕರೆಯುತ್ತಾರೆ. ಈ ಸಮಯದಲ್ಲಿ ಸಾಂಪ್ರದಾಯಿಕ ಹಿಂದೂಗಳೆಲ್ಲರೂ ತಮ್ಮ ಸತ್ತು ಹೋದ ಪಿತೃ (ತಂದೆ, ತಾಯಿ, ಅಜ್ಜ ಇತ್ಯಾದಿ)ಗಳಿಗೆ ಪಿಂಡ ಪ್ರದಾನ, ತಿಲ ತರ್ಪಣ ನೀಡುವ ಪದ್ಧತಿ ಇಂದಿಗೂ ಪ್ರಚಲಿತವಿದೆ. ಈ ಕಾರ್ಯಕ್ರಮ ಭಾದ್ರಪದ ಬಹುಳ ಪಾಡ್ಯದಿಂದ ಅಮಾವಾಸ್ಯೆಯ ವರೆಗೆ ನಡೆಯುತ್ತಿರುತ್ತದೆ. ಇದನ್ನು ಬಹಳ ಶ್ರದ್ಧೆಯಿಂದ ಮಾಡುವರು.

ಇದನ್ನೆಲ್ಲಾ ನೋಡಿ ಪಾಶ್ಚಿಮಾತ್ಯ ವಿದ್ವಾಂಸರು ಮಾತ್ರವಲ್ಲ, ಪ್ರತಿಯೊಬ್ಬ ಬುದ್ಧಿವಾದಿ ವ್ಯಕ್ತಿಯೂ ಹಾಸ್ಯ ಮಾಡದಿರಲಾರ. ಅರೇ! ಈ ವಿಜ್ಞಾನ ಯುಗದಲ್ಲಿಯೂ ಇಂತಹ ಮೂಢಾಚರಣೆಯೋ? ಬುದ್ಧಿ ಜೀವಿಗಳಾದ ನಾವಂತೂ ಇಂತಹ ಅಂಧ ಶ್ರದ್ಧೆಗಳನ್ನು ಹೃತ್ಪೂರ್ವಕವಾಗಿ ಖಂಡಿಸುವುದು ನಮ್ಮ ಕರ್ತವ್ಯವೆಂದೇ ಭಾವಿಸುತ್ತೇವೆ. ಆದ್ದರಿಂದ ಈ ಕ್ರಿಯೆಯ ಬಗ್ಗೆ ಹಾಗೂ ವಿಧಾನದ ಕುರಿತು ವಿಚಾರ ಮಾಡುವುದು ಅಪ್ರಾಸಂಗಿಕ ವಾಗಲಾರದು. ಪಿಂಡದಾನದ ಕ್ರಿಯಾ ಕಲಾಪಗಳ ವಿಧಾನವನ್ನು ನಾವು ಕೇವಲ ಪುರಾಣ ಗಳಲ್ಲಿ ಮಾತ್ರವಲ್ಲದೆ, ಶತಪಥ ಬ್ರಾಹ್ಮಣದ ದ್ವಿತೀಯ ಕಾಂಡದಲ್ಲಿ ನೋಡಬಹುದು. ಅಲ್ಲಿ ಈ ಕ್ರಿಯೆ ಪಿಂಡ-ಪಿತೃಯಜ್ಞವೆಂಬ ಹೆಸರಿನಿಂದ ಪ್ರಸಿದ್ಧವಾಗಿದೆ. ಪೌರಾಣಿಕ ಸಂಪ್ರದಾಯಗಳಲ್ಲಿ ಮಾಡಿಸುವ ಕ್ರಿಯಾ ಕಲಾಪಗಳಿಗೂ ಇದಕ್ಕೂ ಬಹಳಷ್ಟು ಸಾಮ್ಯವೂ ಇದೆ. ಆರ್ಷ ಗ್ರಂಥವಾದ ಈ ಶತಪಥ ಬ್ರಾಹ್ಮಣದಲ್ಲಿಯೂ ಬಂದಿರುವ ಈ ಪಿಂಡ ಪ್ರದಾನವನ್ನು ಮೂಢಾಚರಣೆಯೆಂದು ಉಪೇಕ್ಷೆ ಮಾಡುವುದು ಸರಿಯೇ?–ಎಂಬುದು ಈಗ ನಮ್ಮ ಮುಂದಿರುವ ಪ್ರಶ್ನೆ.

ನಮ್ಮ ಪ್ರಾಚೀನ ಧಾರ್ಮಿಕ ಪರ್ವಗಳೆಲ್ಲದರಲ್ಲೂ ಒಂದಲ್ಲ ಒಂದು ಗೂಢ ರಹಸ್ಯ ಅಡಗಿದೆ. ಹಿಂದೆ ಇದು ಆಕರ್ಷಕವೂ, ಅಪೇಕ್ಷಣೀಯವೂ ಆದ ಕೇಂದ್ರವಾಗಿತ್ತು. ಅಸಂಖ್ಯಾತ ಜನರು ಅವುಗಳ ಆಚರಣೆಯನ್ನು ತಮ್ಮ ಸೌಭಾಗ್ಯವೆಂದು ತಿಳಿಯುತ್ತಿದ್ದರು. ಹಾಗೆಯೇ ಹಿಂದೆ ವೇದ ಪ್ರಚಾರ ಗ್ರಾಮ-ಗ್ರಾಮಗಳಲ್ಲಿಯೂ, ಮನೆ–ಮನೆಗಳಲ್ಲಿಯೂ ನಡೆಯುತ್ತಿದ್ದಾಗ, ಪ್ರತಿಯೊಬ್ಬ ವ್ಯಕ್ತಿಯೂ ವೈದಿಕ ಮರ್ಯಾದೆಗಳ ಪಾಲನೆ ಮಾಡುತ್ತಿದ್ದಾಗ ಈ ಧಾರ್ಮಿಕ ಕಾರ್ಯವೂ ಸಮುಜ್ವಲ ಸ್ವರೂಪವನ್ನು ತಳೆದಿದ್ದಿತ್ತು. ಅದು ಈಗ ವಿಕೃತ ಸ್ವರೂಪವನ್ನು ಪಡೆದು ಹಾಸ್ಯಾಸ್ಪದ ವಿಷಯವಾಗಿದೆ.

ವೈದಿಕ ವರ್ಣಾಶ್ರಮ ವ್ಯವಸ್ಥೆಯಲ್ಲಿ ನಾಲ್ಕು ವರ್ಣಗಳು ಮತ್ತು ನಾಲ್ಕು ಆಶ್ರಮಗಳು ಇರುತ್ತವೆ. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ-ಎಂಬ ನಾಲ್ಕು ವರ್ಣಗಳೂ, ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ ಮತ್ತು ಸನ್ಯಾಸ–ಎಂಬ ನಾಲ್ಕು ಆಶ್ರಮಗಳು. ೫೦ ವರ್ಷ ದಾಟಿದ ಪ್ರತಿಯೊಬ್ಬ ಸುಶಿಕ್ಷಿತ, ಧರ್ಮಾತ್ಮನಾದ ವ್ಯಕ್ತಿಯೂ ವಾನಪ್ರಸ್ಥಾಶ್ರಮವನ್ನು ಸ್ವೀಕರಿಸಬೇಕಿತ್ತು. ತನ್ನ ಮನೆ–ಉದ್ಯೋಗಗಳ ಸಮಸ್ತ ಜವಾಬ್ದಾರಿಯನ್ನೂ ಮಕ್ಕಳಿಗೆ ವಹಿಸಿ, ಮನೆಯಿಂದ ದೂರ, ಗುರುಕುಲಗಳ ಸಮೀಪ ಅಥವಾ ಗುರುಕುಲಗಳಲ್ಲೇ ವಾಸಿಸಬೇಕಿತ್ತು. ಆಗ ಆ ವಾನಪ್ರಸ್ಥಿಯು ತಾನು ಬ್ರಹ್ಮಚರ್ಯಾಶ್ರಮದಲ್ಲಿ ಕಲಿತ ಹಾಗೂ ತನ್ನ ಜೀವನಾನುಭವದಲ್ಲಿ ವೃದ್ಧಿಸಿಕೊಂಡ ಶಿಕ್ಷಣವನ್ನು

ಗುರುಕುಲದಲ್ಲಿ ನಿಃಶುಲ್ಕ, ಹೇಳಿಕೊಡುತ್ತಿದ್ದನು. ಉಳಿದ ಸಮಯವನ್ನು ವೇದಾದಿ ಸತ್ಯ ಶಾಸ್ತ್ರಗಳ ಅಧ್ಯಯನ ಹಾಗೂ ಆತ್ಮ ಚಿಂತನೆಯಲ್ಲಿ ಕಳೆಯುತ್ತಿದ್ದನು. ಜೀವನಕ್ಕೆ ಆಧಾರ ಸ್ತಂಭವಾಗುವ ಶಿಕ್ಷಣವನ್ನು ನೀಡುವ ಗುರುಕುಲಗಳು ಅರಣ್ಯಗಳಲ್ಲಿರುತ್ತಿದ್ದುದರಿಂದ ಮಳೆ ಗಾಲದಲ್ಲಿ ಹೊರಗಿನಿಂದ ಸಾಮಾನು ಸಾಗಾಣಿಕೆಯ ಸಂಪರ್ಕವೇ ಕಡಿದುಹೋಗುತ್ತಿತ್ತು. ಘನಘೋರ ಅರಣ್ಯಗಳಾದ್ದರಿಂದ ವರ್ಷಾ ಕಾಲದ ಜೀವಜಂತುಗಳು, ಕ್ರಿಮಿಕೀಟಗಳು ಅಧಿಕವಾಗಿ ಅಲ್ಲಿ ವಾಸಿಸುವುದೇ ಕಠಿಣವಾಗುತ್ತಿತ್ತು. ಆದ್ದರಿಂದ ವಾನಪ್ರಸ್ಥಿಗಳು ಹಾಗೂ ಇತರ ಗುರುಕುಲವಾಸಿಗಳು ಕಾಡನ್ನು ಬಿಟ್ಟು ನಾಡಿಗೆ ಬಂದು, ಗ್ರಾಮಗಳಲ್ಲಿ ಅಥವಾ ಗ್ರಾಮಗಳ ಹೊರವಲಯಗಳಲ್ಲಿ ತಮಗಾಗಿಯೇ ಗ್ರಾಮಸ್ಥರು ಕಟ್ಟಿಸಿರುವ ಮಂದಿರ ಅಥವಾ ಕುಟೀರಗಳಲ್ಲಿ ನೆಲೆಸಿ ಗ್ರಾಮಸ್ಥರಿಗೂ ಜ್ಞಾನೋಪದೇಶವನ್ನು ಮಾಡುತ್ತಿದ್ದರು. ದೇವ ಜನರು ಎಂದರೆ, ವಿದ್ವಾಂಸರು ನಿವಾಸಿಸುತ್ತಿದ್ದ ಮಂದಿರಗಳಾದ್ದರಿಂದ ಅವುಗಳಿಗೆ ದೇವಸ್ಥಾನ ಗಳೆಂದು ಹೆಸರು. ಪ್ರತಿಯೊಂದು ಗ್ರಾಮಗಳಲ್ಲಿಯೂ ಈ ಜೀವಂತ 'ದೇವ'ರುಗಳಿಂದ ಕಂಗೊಳಿಸುವ ದೇವಾಲಯಗಳಿದ್ದವು. ಯಜ್ಞ, ವೇದಾಧ್ಯಯನ, ವೇದ ಪ್ರವಚನಗಳೇ ದೇವಾಲಯಗಳಲ್ಲಿ ನಡೆಯುತ್ತಿದ್ದ ಕ್ರಿಯಾಕಲಾಪಗಳು. ವಿದ್ವಾಂಸರೂ, ಸನ್ಯಾಸಿ ಪ್ರವರರೂ ಈ ರೀತಿ ನಾಲ್ಕು ತಿಂಗಳ ಕಾಲ ವೇದ ಗಂಗೆಯನ್ನು ಹರಿಯಿಸಿ ಸಜ್ಜನರಾದ ಗೃಹಸ್ಥರನ್ನು ಪುನೀತರನ್ನಾಗಿಸುತ್ತಿದ್ದರು. ಅವರ ಸಂಶಯಗಳನ್ನು ಶಾಸ್ತ್ರಪೂರ್ವಕ, ಯುಕ್ತಿಪೂರ್ವಕವಾಗಿ ಪರಿಹರಿಸುತ್ತಿದ್ದರು. ಅವರ ಜೀವನಗಳಲ್ಲಿ ಹೊಸ ಚೇತನವನ್ನೂ, ದೇಶಪ್ರೇಮ, ಧರ್ಮಪ್ರೇಮ, ಭಗವದ್ಭಕ್ತಿ, ಸಹಜೀವಿಗಳಲ್ಲನುರಕ್ತಿಗಳನ್ನೂ ತುಂಬಿಸು ತ್ತಿದ್ದರು.

ಭಾದ್ರಪದ ಮಾಸದ ನಂತರ ಮಳೆ ಕಡಿಮೆಯಾಗುತ್ತದೆ. ಹಾಗೂ ಮಳೆಗಾಲದ ವಿಶೇಷ ಕ್ರಿಮಿಕೀಟಗಳು ಕಡಿಮೆಯಾಗುವುದರಿಂದ ವಾನಪ್ರಸ್ಥಿಗಳೂ, ಬ್ರಹ್ಮಚಾರಿಗಳೂ ತಮ್ಮ ಅಧ್ಯಾಪನ-ಅಧ್ಯಯನಗಳಿಗಾಗಿ ಗುರುಕುಲಾಶ್ರಮಗಳಿಗೆ ಮರಳುತ್ತಿದ್ದರು. ಗೃಹಸ್ಥ ಕೃಷಿಕರ ಕೃಷಿಕಾರ್ಯಗಳೂ ಈಗ ಆರಂಭವಾಗುತ್ತಿದ್ದವು. ಆದ್ದರಿಂದ ಅವರೂ ಸಹ ವಾನಪ್ರಸ್ಥಿಗಳನ್ನು ಸಹರ್ಷ ಬೀಳ್ಕೊಡುತ್ತಿದ್ದರು. ಏಕೆಂದರೆ ಬಿಡುವಿನ ಸಮಯದಲ್ಲಿ ಜ್ಞಾನಗಂಗೆಯಲ್ಲಿ ಅವರನ್ನು ಮಿಯಿಸಿದ ಆ ವಿದ್ವಾಂಸರು ಅವರಿಗೆ ಗುರುಗಳೇ ಅಲ್ಲವೇ? ಈ ಬೀಳ್ಕೊಡಿಗೆಯನ್ನು ಹದಿನೈದು ದಿನಗಳ ಕಾಲ ಜಾರಿಯಲ್ಲಿಟ್ಟುದೇಕೆಂದರೆ, ಆತುರಾತುರ ವಾಗಿ ಮಾಡಿ ಚಂಚಲತೆ ಅಥವಾ ಯಾವುವೇ ದೋಷ ಈ ಕ್ರಿಯೆಯಲ್ಲಿ ಬಾರದಿರಲೆಂದು. ವಾನಪ್ರಸ್ಥಿಗಳು ಶಾಂತಮೂರ್ತಿಗಳು, ಅವರ ವಿದಾಯವೂ ಶಾಂತಿಪೂರ್ವಕವಾಗಿಯೇ ಆಗ ಬೇಕು. ಗೃಹಸ್ಥರು ತಮ್ಮ ಯೋಗ್ಯತಾನುಸಾರ ಅವರಿಗೆ ದವಸ, ಧಾನ್ಯಾದಿ ಅವಶ್ಯಕ ವಸ್ತುಗಳ ಕಾಣಿಕೆಯಿತ್ತು ಬೀಳ್ಕೊಡುತ್ತಿದ್ದರು. ಈ ರೀತಿ ನಿಧಾನವಾಗಿ ವಾನಪ್ರಸ್ಥಿಗಳು ಹಿಂದೆ-ಮುಂದೆ ತಮ್ಮ ಆಶ್ರಮಗಳಿಗೆ ತೆರಳುತ್ತಿದ್ದರು. ಈ ಕಾರ್ಯವೇ 'ಪಿತೃ-ವಿಸರ್ಜನ' ವೆಂಬುದಾಗಿ ಪ್ರಸಿದ್ಧವಾಗಿದೆ.

ಈಗ 'ಪಿಂಡದಾನ' ಎಂಬುದನ್ನು ಕುರಿತು ಚಿಂತಿಸೋಣ. 'ಪಿಂಡ'ವೆಂದರೆ ಕೇವಲ ಶ್ರಾದ್ಧಗಳಲ್ಲಿಡಲಾಗುವ ಅನ್ನದ ಮುದ್ದೆಗಳೇ ಅಲ್ಲ. 'ಪಿಂಡ' ಎಂದರೆ, ಭೋಜನ ಎಂಬರ್ಥ ದಲ್ಲಿಯೂ ಭರ್ತೃಹರಿಯು ತನ್ನ ನೀತಿಶತಕದಲ್ಲಿ ಬಳಸಿದ್ದಾನೆ. "**ಶ್ವಾ ಪಿಂಡದಸ್ಯ ಕುರುತೇ**

**ಗಜಪುಂಗವಸ್ತು ಧೀರಂ ವಿಲೋಕಯತಿ ಚಾಟುಶತೈಶ್ಚ ಭುಂಕ್ತೇ"** 'ಮುದ್ರಾರಾಕ್ಷಸ' ದಲ್ಲಿಯೂ 'ಪಿಂಡ'ವು ಭೋಜನವೆಂಬ ಅರ್ಥದಲ್ಲಿ ಪ್ರಯೋಗವಾಗಿದೆ—**"ದೈನ್ಯಾದುನ್ಮುಖ ದರ್ಶನಾಪಲ ಪನ್ಯೈಃ ಪಿಂಡಾರ್ಥ ಮಾಯಸ್ಯತಃ । ಸೇವಾಲಾಘವಕಾರಿಣೀಕೃತಧಿಯಃ ಸ್ಥಾನೇಶ್ವವೃತಿಂ ವಿದುಃ ॥"**. ಇದರಿಂದ 'ಪಿಂಡ' ಶಬ್ದ 'ಭೋಜನ'ವೆಂಬುದ ಪರ್ಯಾಯ ವಾಚಿಯಾಗಿದೆ. ವ್ಯಾಕರಣದ ದೃಷ್ಟಿಯಿಂದ 'ಪಿಂಡ' ಶಬ್ದವು 'ಪಿಡಿಸಂಘಾತೇ' ಧಾತುವಿಗೆ 'ಅಚ್' ಪ್ರತ್ಯಯ ಸೇರಿ ಉಂಟಾಗಿದೆ. ಇದರರ್ಥ ಕೆಲವು ಪದಾರ್ಥಗಳನ್ನು ಸೇರಿಸಿ ಒಂದು ದೃಢವಾದ ಉಂಡೆ ಮಾಡುವುದು. ಈ ರೀತಿ ಸೇರಿಸಿ ಆಗಿರುವ ಭೋಜ್ಯವಸ್ತುವಿನ ದಾನವೇ 'ಪಿಂಡದಾನ'ವೆನಿಸುತ್ತದೆ.

ಇಂಪು ಪಿತೃಗಳಿಗೆ ಪಿಂಡದಾನವೆಂದು ಮಾಡಲಾಗುವುದರಲ್ಲಿ ಅಕ್ಕಿಯಿಂದ (ರವೆ) ಪಾಯಸವನ್ನು ಮಾಡಿ ಸಕ್ಕರೆ ತುಪ್ಪ ಸೇರಿಸಿ ಗೋಳದ ಪಿಂಡ (ಸಂಘಾತ) ಮಾಡಿ, ಯಜ್ಞೋಪವೀತವನ್ನು ಎಡಬದಿಗೆ ತೆಗೆದುಕೊಂಡು ದರ್ಭೆಯನ್ನು ಜತೆಯಲ್ಲಿ ಹಿಡಿದು ಕೊಡಲಾಗುತ್ತದೆ. ಈ ಕ್ರಿಯೆಯಲ್ಲಿಯೇ ಬಹಳಷ್ಟು ರಹಸ್ಯ ಅಡಗಿದೆ. ಖೀರು, ಸಕ್ಕರೆ, ತುಪ್ಪ– ಇವು ಸುಲಭವಾಗಿ ಜೀರ್ಣಿಸುವಂತಹುದೂ, ಪೌಷ್ಟಿಕವೂ ಆದ ಭೋಜನವಾಗಿದೆ. ಚರಕ ಸಂಹಿತೆಯಲ್ಲಿ ಖೀರನ್ನು 'ಪರಮಾನ್ನಂ' ಎಂದು ಹೇಳಲಾಗಿದೆ. ಪಿತೃಗಳು ವೃದ್ಧರಾಗಿದ್ದಾರೆ. ಅವರ ಹಲ್ಲುಗಳು, ಕರುಳುಗಳು ಪೂರಿ-ಕಜ್ಜಾಯಗಳನ್ನು ತಿಂದು ಅರಗಿಸಿಕೊಳ್ಳಲು ಶಕ್ತವಲ್ಲ. ಆದ್ದರಿಂದ ಖೀರಿನಂತಹ ಸುಪಚ ಪದಾರ್ಥಗಳನ್ನೇ ಕೊಡಬೇಕು. ಘೃತ ಮತ್ತು ಸಕ್ಕರೆಯನ್ನು ಹಾಕುವ ಕಾರಣವೇನೆಂದರೆ, ಪೌಷ್ಟಿಕ ಹಾಗೂ ಮಧುರ ಭೋಜನವಾಗಲೆಂದು. ಘೃತ ಶರ್ಕರ ಮಿಶ್ರಿತ ಪಾಯಸ ತಿಂದು ಎಲ್ಲಿಯಾದರೂ ಆಲಸಿಯೂ, ಪ್ರಮಾದಿಯೂ, ತಿಂಡಿ ಪೋತನೂ ಆಗದಿರಲೆಂದು ದರ್ಭೆಯೊಂದಿಗೆ ಅದನ್ನು ನೀಡಲಾಗುತ್ತದೆ. ದರ್ಭೆಯು ತಪಸ್ಸಿನ ಪ್ರತೀಕ ಮತ್ತು ತಪಸ್ಸು ವಾನಪ್ರಸ್ಥಿಯ ಜೀವನದ ಮೇರುದಂಡ. ವಿಲಾಸಿಯಾದವನು ವಾನ ಪ್ರಸ್ಥಿಯಲ್ಲ. ಎದೆಯಲ್ಲಿ ಹೃದಯವು ಎಡಬದಿಗಿದೆ. ಹೃದಯ ಪ್ರೇಮದ ಆಗರ. ಆದುದ ರಿಂದ ಯಜ್ಞೋಪವೀತವನ್ನು ಎಡಬದಿಗೆ ಬರುವಂತೆ ಹಾಕಿಕೊಂಡು ಪಿಂಡದಾನ ಮಾಡಲಾಗು ತ್ತದೆ. ಈ ಕ್ರಿಯೆಯ ಮೂಲಕ ಗೃಹಸ್ಥರು ಹೇಳುತ್ತಾರೆ:–"ಹೇ ಪಿತೃಗಳೇ! ನಾವೆಲ್ಲರೂ ನಿಮಗೆ ಹೃತ್ಪೂರ್ವಕ ಆಭಾರಿಗಳಾಗಿದ್ದೇವೆ. ನಮ್ಮ ಮಸ್ತಿಷ್ಕಗಳಲ್ಲಿ ಮಾತ್ರವಲ್ಲ, ಹೃದಯ ಗಳಲ್ಲಿಯೂ ಸ್ಥಾನವನ್ನು ಪಡೆದಿದ್ದೀರಿ. ನಿಮಗೆ ಮಾಡುವ ಸತ್ಕಾರ ತೋರಿಕೆಯದಲ್ಲ. ಇದನ್ನು ಹೃತ್ಪೂರ್ವಕ ಮಾಡುತ್ತಿದ್ದೇವೆ." ಗೋಲಾಕಾರದ ಪಿಂಡ ಮಾಡುವುದರ ಉದ್ದೇಶ ವೇನೆಂದರೆ, ಪಿತೃಗಳು ಅರ್ಥಾತ್ ವಾನಪ್ರಸ್ಥಿಗಳು ಗುರುಕುಲಗಳಿಗೆ ಹೋಗುವಾಗ ಅವರಿಗೆ ಭೋಜನ ವ್ಯಯವನ್ನು ಪದೇಪದೇ ಕಳುಹಿಸುವಂತಾಗದಿರಲೆಂದು ಹಾಗೂ ಅವರು ಅದಕ್ಕಾಗಿ ಗೃಹಸ್ಥರ ಮನೆಗಳಿಗೆ ಬರುವಂತಾಗದಿರಲೆಂದು. ಪಿಂಡ (ಸಂಘಾತ) ಅರ್ಥಾತ್, ವರ್ಷಕ್ಕಾಗು ವಷ್ಟು ಭೋಜನ ದ್ರವ್ಯಗಳನ್ನು ಕೊಡಬೇಕು. ಏಕೆಂದರೆ ಆರ್ಥಿಕ ಕಾರಣಗಳಿಂದ ಮಾನಸಿಕ ಅಶಾಂತಿ ಮತ್ತು ಚಿಂತೆ ಉಂಟಾಗದೆ ಅವರು ಅಧ್ಯಾಪನಾದಿ ಲೋಕಹಿತಕಾರ್ಯಗಳಲ್ಲಿ ತೊಡಗಬೇಕು. ಗೋಳ (ಉಂಡೆ) ಮಾಡಿಕೊಡುವ ಉದ್ದೇಶವೇನೆಂದರೆ ಅದನ್ನು ಎಷ್ಟು ಕೊಡಲಾಗುವುದೋ ಅದನ್ನು ಹೇಳಬಾರದು. ಎಲ್ಲವನ್ನೂ ಉಂಡೆ ಕಟ್ಟಿದಾಗ ಯಾವ ರೀತಿ

ಯಾವ ಪದಾರ್ಥ ಎಷ್ಟಿದೆ–ಎಂದು ತಿಳಿದುಬರುವುದಿಲ್ಲವೋ ಅದೇ ರೀತಿ, ಪ್ರಚಾರಕ್ಕಾಶಿಸದೆ ಪಿತೃಗಳಿಗೆ ಯಥಾಯೋಗ್ಯವಾಗಿ ಕಾಣಿಕೆಯನ್ನು ಕೊಟ್ಟು ಸತ್ಕರಿಸಬೇಕಾಗಿ ಇದರ ಭಾವ.

ಈ ರೀತಿ ಪಿಂಡಪ್ರದಾನ ಅಥವಾ ಪಿತೃ ವಿಸರ್ಜನಕ್ರಿಯೆಗಳು ವೈದಿಕ ಸಂಸ್ಕೃತಿಯ ಮಹತ್ವವನ್ನು ಎತ್ತಿತೋರಿಸುತ್ತಿವೆ. ಆದರೆ ಇಂದು ಸತ್ತವರನ್ನು ಮಾತ್ರ 'ಪಿತೃ'ಗಳೆಂದು ತಿಳಿದು 'ಶ್ರಾದ್ಧ' ಮಾಡುವ ಪದ್ಧತಿ ರೂಢಿಯಲ್ಲಿ ಬಂದಿವೆ. ಜೀವಿತರಾಗಿದ್ದಾಗ ತಂದೆತಾಯಿಗಳಿಗೆ ಒಪ್ಪತ್ತಿನ ಊಟ ಹಾಕದಿದ್ದವನೂ ಸಹ ಪ್ರತಿವರ್ಷವೂ ಶ್ರಾದ್ಧದ ಹೆಸರಿನಲ್ಲಿ 'ಭೂಸುರ'ರಿಗೆ ಭೂರಿಭೋಜನ ಮಾಡಿಸಿ, ಯಥೇಚ್ಛ ದಕ್ಷಿಣೆ ಕೊಡುತ್ತಿರುವುದನ್ನು ಕಾಣುತ್ತೇವೆ. ಆದರೆ ಮಹರ್ಷಿ ದಯಾನಂದರ **"ಶ್ರದ್ಧಯಾ ಯತ್ಕ್ರಿಯತೇ ತಚ್ಛ್ರಾದ್ಧಂ"**–ಎಂಬ ಉದ್ಘೋಷ ನೆನಪಿನಲ್ಲಿದ್ದರೆ, ಬಹಿರಾಡಂಬರಪೂರ್ಣವಾದ ಶ್ರಾದ್ಧ ವಿಧಿಗಳು ನಿಂತು ನಿಜವಾದ ಅರ್ಥದಲ್ಲಿ, 'ಜೀವಿತ ಮಾತಾಪಿತೃಗಳ ಸೇವೆಯನ್ನು ಶ್ರದ್ಧೆಯಿಂದ ಮಾಡುವುದೇ ಶ್ರಾದ್ಧ' ಎಂಬ ಸತ್ಯವನ್ನು ಅರಿತುಕೊಳ್ಳಲು ಸಾಧ್ಯ. ನಿಜವಾದ ಅರ್ಥದಲ್ಲಿ ಶ್ರಾದ್ಧಗಳು ನಡೆದುದಾದರೆ ತ್ರಸ್ತರಾದ ವೃದ್ಧ (distressed oldmen)ರ ಸಮಸ್ಯೆ ಪರಿಹಾರವಾಗಬಲ್ಲದು. ಮತ್ತು ಮಾನವೀಯತೆಗೆ ಬಹುದೊಡ್ಡ ಬೆಲೆ ಸಂದಂತಾಗುವುದು. ಆದ್ದರಿಂದ ಪಿತೃಗಳ ಅಂದರೆ ದೇವಜನರ, ಜೀವಿತ ಮಾತಾಪಿತೃಗಳ ಹಾಗೂ ವಿದ್ವಾಂಸರ ಯಥಾಯೋಗ್ಯ ಸತ್ಕಾರವು ಶ್ರದ್ಧೆಯಿಂದ ಎಲ್ಲೆಲ್ಲೂ ನಡೆಯುವಂತಾದಾಗಲೇ ನಿಜವಾದ ವೈದಿಕ ಸಂಸ್ಕೃತಿ ಬೆಳೆಯಬಲ್ಲದು, ನಮ್ಮನ್ನೂ ಬೆಳೆಸಬಲ್ಲದು.

ನಿಜವಾದ ಅರ್ಥದಲ್ಲಿ ಪಿತೃಯಜ್ಞ, ಶ್ರಾದ್ಧ, ಪಿಂಡದಾನ, ಪಿತೃವಿಸರ್ಜನಾದಿಗಳು ಆಚರಣೆಯಲ್ಲಿ ಬಂದರೆ ವೈದಿಕ ಸಂಸ್ಕೃತಿಯು ಪ್ರಾಚೀನ ವೈಭವದಿಂದ ಮೈತಾಳಿಬರುವುದರಲ್ಲಿ ಸಂಶಯವಿಲ್ಲ. ಇವುಗಳ ಯಥಾಯೋಗ್ಯ ಆಚರಣೆಯಿಂದ ಗೃಹ ಕಲಹ, ವಿದ್ಯಾಕ್ಷೇತ್ರದಲ್ಲಿನ ಭ್ರಷ್ಟಾಚಾರ, ವಿದ್ಯಾರ್ಥಿಗಳಲ್ಲಿ ದಿಸೆಗೇಡಿತನ, ಅಶಾಂತಿ-ಇತ್ಯಾದಿ ಸಮಸ್ಯೆಗಳ ಶಾಶ್ವತ ಪರಿಹಾರವಾಗಬಲ್ಲುದು. ಮಹರ್ಷಿ ದಯಾನಂದರು ಇಂತಹ ಪರಿಶುದ್ಧ ವೈದಿಕ ಸಂಸ್ಕೃತಿಯ ಪುನರವಿರ್ಭಾವವನ್ನು ಇಡೀ ಜಗತ್ತಿನಲ್ಲಿಯೇ ಕಾಣಬೇಕೆಂಬ ಆಕಾಂಕ್ಷೆ ಹೊಂದಿದ್ದರು. ಆದ್ದರಿಂದ ಅವರು ಷೋಡಶ ಸಂಸ್ಕಾರಗಳನ್ನು ಜಾರಿಗೆ ತರಲು 'ಸಂಸ್ಕಾರ ವಿಧಿ'ಯನ್ನು ರಚಿಸಿದರು. ಆದರೆ ಆದರ ಮಹೋನ್ನತ ವಿಚಾರಗಳೆಲ್ಲಾ ಪುಸ್ತಕದ ಮಾಲಾಗಿಯೇ ಉಳಿದಿದೆಯಲ್ಲದೆ ಮಸ್ತಕದ ಸರಕಾಗಲಿಲ್ಲ, ಹಸ್ತಕ್ಕೂ (ಕಾರ್ಯದಲ್ಲಿ) ಬಂದು ಸೇರಲಿಲ್ಲ. ಇದು ಭಾರತೀಯರ, ವೈದಿಕ ಧರ್ಮೀಯರ ದೌರ್ಭಾಗ್ಯವೆನ್ನದೆ ವಿಧಿಯಿಲ್ಲ.

ಇದು ವಿಜ್ಞಾನಯುಗ. ಮಾನವನು ವಿಚಾರಶಕ್ತಿಯಿಂದ, ಬುದ್ಧಿಕೌಶಲದಿಂದ ಅದ್ಭುತವಾದ ಸಾಧನೆಗಳನ್ನು ಮಾಡಿದ್ದಾನೆ. ಆದರೆ ಇದೆಲ್ಲಾ ಶರೀರವನ್ನು ಸುಖವಾಗಿಡಲು ಮಾತ್ರ ಶಕ್ತವಾಗಿವೆಯಲ್ಲದೆ, ಶಾರೀರಿಕ ಸುಖಕ್ಕಿಂತ ಸಾವಿರಪಾಲು, ಲಕ್ಷಪಾಲು ಶ್ರೇಷ್ಠವಾದ ಮಾನಸಿಕ ಸುಖವನ್ನೆರೆಯಲು ಶಕ್ತವಾಗಿಲ್ಲ. ಅದಕ್ಕಿಂತ ಎಷ್ಟೋಪಾಲು ಹಿರಿದಾದ ಆತ್ಮಿಕ ಆನಂದವಂತೂ ಕನಸಿನ ಮಾತಾಗಿದೆ. ಪ್ರಬಲ ಪುರುಷಾರ್ಥದಿಂದ

ಮಾನವನು ಈ ಭೌತಿಕ ಸುಖಗಳನ್ನು ಸಾಧಿಸಲು ಶಕ್ತನಾಗಿರುವಂತೆ, ಅದೇ ರೀತಿಯ ಪ್ರಬಲ ಪುರುಷಾರ್ಥದ ಬಲದಿಂದ ಆತ್ಮಿಕ ಆನಂದವನ್ನೂ ಪಡೆಯುವುದು ಅಸಾಧ್ಯವಲ್ಲವಷ್ಟೆ! ಬುದ್ಧಿಜೀವಿಯಾದ ಮಾನವನು ಬುದ್ಧಿಪೂರ್ವಕವಾಗಿ ಎಲ್ಲಾ ವಿಚಾರಗಳನ್ನೂ ವಿಮರ್ಶಿಸಿ, ಸತ್ಯಾಚರಣೆಯನ್ನು ದೃಢತೆಯಿಂದ ಮಾಡುತ್ತಾ ಸಾಗಬೇಕು. ಪರಮಾತ್ಮನು ಇದಕ್ಕಾಗಿ ನಮಗೆಲ್ಲರಿಗೂ ಆತ್ಮಿಕ ಬಲವನ್ನು ಅನುಗ್ರಹಿಸಲಿ.

ಓಂ ಶಮ್ !

---

# ಧಾರ್ಮಿಕ ವಿವಾಹ ಕಾಲದಲ್ಲಿ ವರನ ಖರೀದಿ ಬೆಲೆ

● ಶ್ರೀಮತಿ ನಳಿನಾಗುಪ್ತ

ಸಮಾಜದಲ್ಲಿ ಕೆಲವೊಂದು ಘಟನೆಗಳು ಸದಾಕಾಲ ನಡೆಯುತ್ತಿರುತ್ತವೆ. ಆದರೆ ಅದು ಬೇರೆಯವರ ಜೀವನದಲ್ಲಿ ಘಟಿಸಬಹುದು; ಆದರೆ ನನ್ನ ಜೀವನದಲ್ಲಿ ಘಟಿಸಲಿಕ್ಕಿಲ್ಲ ಎಂದು ನಾನು ಭಾವಿಸಿದ್ದೆ. ಅದರಲ್ಲಿಯೂ ನಮ್ಮಂತಹ ಶಿಕ್ಷಿತ ಮತ್ತು ಸಭ್ಯರೆನಿಸಿಕೊಳ್ಳುವವರಲ್ಲಿ ಖಂಡಿತ ಘಟಿಸಲಿಕ್ಕಿಲ್ಲ—ಎಂದು ನಾನು ಭಾವಿಸಿದ್ದೆ. ಆದರೆ ನನ್ನ ಎಣಿಕೆ ಸುಳ್ಳಾಯಿತು.

ಕೆಲವು ಸಮಯದ ಹಿಂದೆ ಇಂತಹ ಘಟನೆಯೊಂದು ನನ್ನ ಪ್ರಿಯ ಗೆಳತಿಯ ಜೀವನದಲ್ಲಿ ಸಂಭವಿಸಿತು. ನನ್ನ ಗೆಳತಿ ರಜನಿ ಸುಂದರಿಯಾಗಿದ್ದಳು. ಮಧುರಭಾಷಿಣಿಯೂ, ಗೌರವರ್ಣದವಳೂ ಹೃಷ್ಟಪುಷ್ಟ ಶರೀರದವಳೂ ಆಗಿದ್ದಳು. ಎಂ. ಎಸ್ಸಿಯಲ್ಲಿ ಓದುತ್ತಿದ್ದಳು. ಪ್ರಾಯ ಕೇವಲ ೨೦ ವರ್ಷವಷ್ಟೆ. ಅವಳ ವಿವಾಹಕ್ಕಾಗಿ ತಂದೆ ಯೋಗ್ಯನಾದ ವರನನ್ನು ಹುಡುಕುತ್ತಿದ್ದರು. ರಜನಿಯ ಅಜ್ಜ ಬಹಳ ಉತ್ಸಾಹದಿಂದ ವೈವಾಹಿಕ ವಿಜ್ಞಾಪನೆಗಳನ್ನು ನೋಡಿ ಹುಡುಗ ಮತ್ತು ಅವನ ತಂದೆ-ತಾಯಿಯವರೊಡನೆ ಪತ್ರವ್ಯವಹಾರ ಮಾಡುತ್ತಿದ್ದರು.

ರಜನಿಯ ತಂದೆ ಪ್ರಶಿಕ್ಷಣ ಕೇಂದ್ರಕ್ಕೆ ಹೋಗಿದ್ದರು. ಅಲ್ಲಿ ಕೇಂದ್ರೀಯ ಉದ್ಯೋಗಕ್ಕೋಸ್ಕರ ಒಬ್ಬ ಯುವಕನು ಟ್ರೈನಿಂಗ್ ತೆಗೆದುಕೊಳ್ಳುತ್ತಿದ್ದ. ಯುವಕ ಚೆನ್ನಾಗಿಯೇ ತೋರುತ್ತಿದ್ದುದರಿಂದ ರಜನಿಯ ತಂದೆ, ಆ ಯುವಕ ತನ್ನ ಮಗಳಿಗೆ ತಕ್ಕ ವರನೆಂದು ತಿಳಿದು ಜಾತಕದೊಂದಿಗೆ ಆ ಯುವಕನ ತಂದೆ ಮನೋವಿಜ್ಞಾನದ ಪ್ರೊಫೆಸರರೊಡನೆ ಭೇಟಿಮಾಡಲು ಹೋದರು.

ಕೆಲವೇ ದಿನಗಳಲ್ಲಿ ಆ ಯುವಕ ಮತ್ತು ಅವನ ತಂದೆತಾಯಿಯವರು ರಜನಿಯನ್ನು ನೋಡಲು ಬಂದರು: ಊಟವಾದ ಬಳಿಕ ಆ ಯುವಕನ ತಂದೆಯವರು ಇಂದಿನ ನವಯುವಕರ ಬಗ್ಗೆ ಬಹಳ ವಿಸ್ತಾರವಾಗಿ ಬಣ್ಣನೆ ಮಾಡಿದರು. ಸಾಮಾಜಿಕ ರೋಗಗಳ ಬಗ್ಗೆ ಅವರ ಉನ್ನತ ವಿಚಾರಗಳನ್ನು ಕೇಳಿ ನಾವೆಲ್ಲರೂ ಬಹಳ ಪ್ರಭಾವಿತರಾದೆವು.

ಮರುದಿನ ಪ್ರಾತಃಕಾಲ ಆ ಯುವಕನ ತಂದೆ–ತಾಯಿಯವರು ರಜನಿಯನ್ನು ನೋಡಿ ಬಹಳವಾಗಿ ಮೆಚ್ಚಿದರು. ಅವಳನ್ನು ತಮ್ಮ ಸೊಸೆಯನ್ನಾಗಿ ಮಾಡಿಕೊಳ್ಳಲು ನಿಶ್ಚಯಿಸಿದರು. ಅದೇ ದಿನ ರಾತ್ರಿ ಮದುವೆಯ ನಿಶ್ಚಯವಾಗುವುದಿತ್ತು. ರಜನಿಯು ತನ್ನ ಭಾವೀ ಅತ್ತೆ, ಮಾವ ಮತ್ತು ಗಂಡನೊಂದಿಗೆ ಸೀರೆಯನ್ನು ಕೊಳ್ಳಲು ಮಾರ್ಕೆಟ್ಟಿಗೆ ಹೋದಳು. ಇತ್ತ ಮನೆಯಲ್ಲಿ ಔತಣದ ಏರ್ಪಾಡಾಯಿತು. ಬಂಧುಬಳಗದವರನ್ನೂ ಕರೆಯಲಾಯಿತು. ಅದೇ ದಿನ ರಾತ್ರಿ ಹೊಸ ಸೀರೆ ಮತ್ತು ಆಭರಣಗಳೊಂದಿಗೆ ರಜನಿಯು ಅಲಂಕೃತಳಾಗಿದ್ದಳು. ಅಂದೇ ಮದುವೆಯು ನಿಶ್ಚಿತವೂ ಆಯಿತು. ಎಲ್ಲರೂ ಬಹಳ ಸಂತುಷ್ಟರಾಗಿದ್ದರು.

ಮೂರನೆಯ ದಿನ ಬೆಳಿಗ್ಗೆ ರಜನಿಯ ಭಾವೀ ಅತ್ತೆ ಮಾವಂದಿರು ಅವಳ ತಂದೆ ತಾಯಿಯರ ಬಳಿಗೆ ಬಂದರು. ಎಲ್ಲರೂ ಒಟ್ಟಿಗೆ ಕುಳಿತು ಶಿಷ್ಟಾಚಾರದ ಮಾತುಗಳಾದ ಬಳಿಕ

ಯುವಕನ ತಂದೆ ಒಮ್ಮಿಂದೊಮ್ಮೆಗೆ-"ನೀವು ನಮ್ಮ ಅಪಮಾನ ಮಾಡಿದಿರಿ. ಮದುವೆಯ ನಿಶ್ಚಿತ ಮುಹೂರ್ತಕ್ಕೆ ಕೇವಲ ಒಂದು ಸಾವಿರದ ಒಂದು ರೂಪಾಯಿ ಕೊಡುವುದು ಸರಿಯೇ? ನಿಮಗಿದು ತಿಳಿದಿರಬೇಕಿತ್ತು. ತನ್ನ ಅಂತಸ್ತಿಗನುಸಾರ ಪ್ರತಿಯೊಬ್ಬ ಯುವಕನಿಗೆ ಬೇರೆ ಬೇರೆ ಮೌಲ್ಯವಿದೆ. ಓವರ್‌ಸಿಯರ್ ಸೆಕೆಂಡ್ ಕ್ಲಾಸ್ ಆಫೀಸರ್ ಮತ್ತು ಫಸ್ಟ್ ಕ್ಲಾಸ್ ಆಫೀಸರ್ ಇವರಿಗೆ ಬೇರೆ ಬೇರೆ 'ಗೌರವ'ವಿದೆ. ಅದೇ ರೀತಿ ತಮ್ಮದೇ ಆದ ಬೇರೆ ಬೇರೆ ಮೌಲ್ಯಗಳೂ ಇವೆ. ನಿಮಗೂ ಇದರ ಬಗ್ಗೆ ತಿಳಿದಿರಬಹುದು!" [ಉತ್ತರ ಭಾರತದಲ್ಲಿ ಮದುವೆಯ ನಿಶ್ಚಿತ ಮುಹೂರ್ತಕ್ಕೆ ಮತ್ತು ಮದುವೆ ಸಮಯದಲ್ಲಿ ಪ್ರತ್ಯೇಕ ಪ್ರತ್ಯೇಕವಾಗಿ ವರದಕ್ಷಿಣೆ ಕೊಡುವ ಪದ್ಧತಿಯಿದೆ] ಇದನ್ನು ಕೇಳಿದ ರಜನಿಯ ತಂದೆ ಬಹಳ ದುಃಖಿತರಾಗಿ ಹೇಳಿದರು. "ನಿನ್ನೆ ನಿಮ್ಮೊಡನೆ ಈ ವಿಷಯದಲ್ಲಿ ಬಾರಿಬಾರಿಗೂ ವಿನಂತಿ ಮಾಡಿದರೂ ನೀವೇನು ಆ ಬಗ್ಗೆ ಉತ್ತರಕೊಡದೆ ಸುಮ್ಮನಿದ್ದಿರಿ"

ಯುವಕನ ತಂದೆ ಆವೇಶದಲ್ಲಿಯೇ ಇದ್ದರು. ವರದಕ್ಷಿಣೆಯ ಭೂತ ಅವರ ಮೇಲೆ ಸವಾರಿಯಾಗಿತ್ತು. "ನೀವು ಹೇಳುವುದು ಸರಿ. ಆದರೆ ಒಬ್ಬ ಯುವಕನ ಮೌಲ್ಯದ ಪರಿಜ್ಞಾನ ಮತ್ತು ಅದನ್ನು ಕೊಡುವ ವಿಷಯ ನಿಮ್ಮ ಗಮನದಲ್ಲಿ ಇರಬೇಕಿತ್ತು. ಈ ಎಲ್ಲಾ ವಿಷಯಗಳನ್ನು ನಮ್ಮೊಡನೆ ಕೇಳುವ ಅಗತ್ಯವೇ ಇರಲಿಲ್ಲ". ಇದನ್ನು ಕೇಳಿ ರಜನಿಯ ತಂದೆಗೆ ಬಹಳ ಖೇದವಾಯಿತು. ಅವರಿಂದ ಏನೂ ಮಾತನಾಡಲಾಗಲಿಲ್ಲ. ಸುಮ್ಮನೆ ವರಪಿತನ ಮುಖವನ್ನು ನೋಡುತ್ತಾ ಕುಳಿತರು. ಯಾವುದೇ ಒಬ್ಬ ಸದ್ಗೃಹಸ್ಥ ಮಾತ್ರವಲ್ಲದೆ ಮನೋವಿಜ್ಞಾನದ ಪ್ರೊಫೆಸರರ ಬಾಯಿಯಿಂದ ಇಂತಹ ಮಾತುಗಳು ಹೊರಡುವುದು ಸರ್ವಥಾ ಶೋಭಿಸತಕ್ಕದ್ದಲ್ಲ. ಇಂತಹವರೇ ಮಾನವೀಯ ಸಂಬಂಧದ ಮಹತ್ವ ಮತ್ತು ವೈವಾಹಿಕ ವಿಷಯದಲ್ಲಿ ಪಾರಸ್ಪರಿಕ ಸಮ್ಮಾನದ ಅವಶ್ಯಕತೆಯನ್ನು ತಿಳಿದುಕೊಂಡಿರುವರೆಂಬುದನ್ನು ಆಶಿಸಬಹುದಿತ್ತು. ಏಕೆಂದರೆ ಅವರು ಮನೋವಿಜ್ಞಾನದ ಪ್ರೊಫೆಸರರಾಗಿದ್ದರು. ಆಶೆ ನಿರಾಶೆಯಾಯಿತು. ಇಷ್ಟು ಸಾಲದೆ ಇನ್ನೊಂದು ಏಟನ್ನು ಕೊಟ್ಟರವರು. "ರಾಷ್ಟ್ರ ಸೇವಾ ವಿಭಾಗದಲ್ಲಿ ಕಾರ್ಯ ನಿರತನಾಗಿರುವ ಯುವಕನ ಮೌಲ್ಯ ಮೂರು ಲಕ್ಷ ರೂಪಾಯಿ, ಆಯ್. ಎ. ಎಸ್. (ಕಲೆಕ್ಟರ್ ಅಥವಾ ಡಿ. ಸಿ.) ಆದವನ ಮೌಲ್ಯ ಎರಡು ಲಕ್ಷ ರೂಪಾಯಿ ಮತ್ತು ಸೀನಿಯರ್ ಆಫೀಸರನ ಮೌಲ್ಯ ಒಂದು ಲಕ್ಷ ರೂಪಾಯಿ" ಅವರ ಈ ಮಾತಿನ ಆಶಯವಿಷ್ಟೆ. ಅವರಿಗೆ ಒಂದು ಲಕ್ಷ ರೂಪಾಯಿ ವರದಕ್ಷಿಣೆ ಕೊಡಬೇಕಾಗಿತ್ತು,

ಮದುವೆ ನಿಶ್ಚಯವಾಗಿ ಆಗಿದೆ, ನಿಶ್ಚಯವಾದ ನಂತರ ಸಂಬಂಧ ಮುರಿದರೆ ಹುಡುಗಿಯ ಮೇಲೆ ಅಪವಾದ ಬರಬಹುದು, ಕೇಳಿದವರೆಲ್ಲರೂ "ಬಹುಶಃ ಹುಡುಗಿಯ ಗುಣ-ನಡತೆ ಸರಿ ಇರಲಿಕ್ಕಿಲ್ಲ, ಆದ್ದರಿಂದಲೇ ಸಂಬಂಧ ಮುರಿದು ಹೋಗಿರಬಹುದು"-ಎಂದೇ ಹೇಳುವರು. ಇಂತಹ ಸಮಯದಲಿ ಹುಡುಗಿ, ಅವಳ ತಾಯಿ-ತಂದೆ ಮತ್ತು ಸಮಸ್ತ ಕುಟುಂಬದ ಮರ್ಯಾದೆ ಆ ಹುಡುಗ ಮತ್ತು ಅವನ ತಂದೆಯ ಕೈಲಿದೆ-ಎಂಬುದನ್ನು ತಿಳಿದ ಆ ವರ ಪಿತೃ ರಜನಿಯ ತಂದೆಯಿಂದ ತುಂಬಾ ಹಣ ದೋಚಿಕೊಳ್ಳಬಯಸಿದರು. ರಜನಿಯ ತಂದೆ ಆದದ್ದಾಗಲೆಂದು ಅವರನ್ನೆಲ್ಲಾ ವಾಪಸ್ಸು ಕಳಿಸಿದರು. ಈ ವಿಷಯವನ್ನು ರಜನಿಯೇ ನನ್ನೊಡನೆ ಬಂದು ಹೇಳಿದಳು, ಆಗ ಅವಳ ಮನಸ್ಸಿನಲ್ಲಿ ಮೂಡಿದ್ದ ನಿಶ್ಚಯವಿದು:—

"ಆಶ್ಚರ್ಯದ ವಿಷಯವೇನೆಂದರೆ, ಬಹಳ ಜನರು ವರದಕ್ಷಿಣೆಯನ್ನು ಕೊಡುತ್ತಿರುತ್ತಾರೆ. ಅವರಿಗೆ ಅನುಕೂಲವಿದ್ದಿರಬಹುದು. ಎಲ್ಲರಿಗೂ ಇದು ಸಾಧ್ಯವೇ? ಈ ರೀತಿ ವರದಕ್ಷಿಣೆ ಪಡೆದು ಮದುವೆಯಾದ ನಂತರ ಕನ್ಯೆ ತನ್ನ ಗಂಡನನ್ನು ಸರಿಯಾಗಿ ಪ್ರೀತಿಸುವಳೇ? ತನ್ನ ತಂದೆಯನ್ನು ಜೀವಮಾನವಿಡೀ ದುಃಖಿತರನ್ನಾಗಿ, ವಿವಶರನ್ನಾಗಿ ಮಾಡಿದರೆಂಬ ಭಾವನೆ ಅವಳ ಮನಸ್ಸಿನಲ್ಲಿರುವುದಿಲ್ಲವೇ? ಇಂತಹ ಸಮಯದಲ್ಲಿ ಎರಡೂ ಪರಿವಾರದ ಶಾಂತಿ ಮತ್ತು ನೆಮ್ಮದಿ ನಾಶವಾಗುವುದಿಲ್ಲವೇ? ಇಂತಹ ಮದುವೆಗಳ ಮಹತ್ವವೇನು? ಯಾವ ಹುಡುಗನಿಗಾಗಿ ಆತನ ತಂದೆ, ತಾಯಿಗಳು ತುಂಬಾ ವರದಕ್ಷಿಣೆ ಕೇಳುತ್ತಾರೋ, ಅಂತಹ ಹುಡುಗನನ್ನು ನಾನು ಖಂಡಿತವಾಗಿಯೂ ಗೌರವಿಸುವುದಿಲ್ಲ; ಎಂದಿಗೂ ಪ್ರೀತಿಸುವುದಿಲ್ಲ."

ಈ ಹುಡುಗಿಯು ವಿವಾಹವನ್ನು ಒಂದು ವ್ಯಾಪಾರವೆಂಬುದಾಗಿ ಯಾವ ಒಂದು ಚಿತ್ರಣವನ್ನು ಪ್ರಸ್ತುತ ಪಡಿಸಿದ್ದಾಳೆಯೋ ಅದು ಹೃದಯಗ್ರಾಹಿಯಾಗಿದೆ. ಸಮಾಜದ ಶಿಕ್ಷಿತ ವರ್ಗದವರಿಂದ ಈ ಕೆಟ್ಟ ಪದ್ಧತಿಯ ನಿವಾರಣೆಯ ಆಶಯವನ್ನು ಮಾಡಬಹುದಾಗಿದೆ. ಏಕೆಂದರೆ ಯಾವ ಶಿಕ್ಷಣದಿಂದ ತಿಳಿವು ಮತ್ತು ನೈತಿಕ ಸಾಹಸದ ಪರಿಚಯವೇ ಆಗಲಾರದೋ ಅಂಥಾ ಶಿಕ್ಷಣದಿಂದ ಲಾಭವೇನು? ಯಾವ ವ್ಯಕ್ತಿಗಳು ಇದನ್ನು ಕಾರ್ಯರೂಪಕ್ಕಿಸಲು ಯತ್ನಿಸುವರೋ ಅವರೇ, ಶಬ್ದದ ಸರಿಯಾದ ಅರ್ಥದಲ್ಲಿ ಶಿಕ್ಷಿತರು, ಸಭ್ಯರು-ಎಂದು ಕರೆಯಿಸಿಕೊಳ್ಳಲು ಯೋಗ್ಯರಾಗಿರುತ್ತಾರೆ. ಆತ್ಮ ಗೌರವ ಹೀನವಾದ ಈ ವರದಕ್ಷಿಣೆಯ ಪದ್ಧತಿ, ವಸ್ತುತಃ ಅಮಾನವೀಯವೂ ಆಗಿದೆ. ಇದರ ಕ್ರೂರ ಆಘಾತದಿಂದ ಎಷ್ಟೋ ಮಂದಿ ಸಹೋದರಿಯರ ಜೀವನದ ಬಲಿದಾನವಾಗಿದೆಯೋ ಬಲ್ಲವರಾರು? ಸಾಮಾಜಿಕ ಯೋಗಕ್ಷೇಮದ ನಾಶವು ಇದರಿಂದ ನಡೆಯುತ್ತಾ ಇದೆ. ಇದರ ಪರಿಣಾಮವಾಗಿ ಅಂತರ್ಜಾತೀಯ ವಿವಾಹಗಳ ಆಶ್ರಯ ಪಡೆಯಲಾಗುತ್ತಿದೆ. ಅನೇಕ ಕಡೆ ವರನ ಕಡೆಯವರೇ ವಧುವಿನ ವಿವಾಹದ ವೆಚ್ಚವನ್ನು ವಹಿಸಿಕೊಳ್ಳಲಾರಂಭಿಸಿದ್ದಾರೆ. ನಮ್ಮ ಯುವಕ ವರ್ಗವು ಈ ವರದಕ್ಷಿಣೆಯ ದುಷ್ಟ ಪದ್ಧತಿಯನ್ನು ನಿರ್ಮೂಲಗೊಳಿಸಲು ಕಟಿಬದ್ಧರಾಗಿ ನಿಲ್ಲಬೇಕಾದ ಕಾಲ ಬಂದಿದೆ. ಇದಕ್ಕಾಗಿ ಸಂಪ್ರದಾಯವಾದೀ ಹಿರಿಯರನ್ನು ಹೃದಯಪರಿವರ್ತನೆಗೊಳ್ಳುವಂತೆ ಮಾಡಿ, ವರದಕ್ಷಿಣೆಯ ಅನಿಷ್ಟ ಪರಿಣಾಮಗಳಿಂದಾಗುವ ಸಂಕಟಗಳಿಂದ ಪಾರಾಗಬೇಕಾಗಿದೆ. ವಿವಾಹಗಳಲ್ಲಿ ಗುಣ, ಯೋಗ್ಯತೆ ಮತ್ತು ಸಂಸ್ಕಾರಗಳಿಗೆ ಮಹತ್ವ ಸಿಕ್ಕಬೇಕಾದುದು ಅಗತ್ಯವೇ ಹೊರತು ಜಾತಿ, ಆಡಂಬರ, ವರದಕ್ಷಿಣೆ ಮತ್ತು ಸ್ಥಾನಮಾನಗಳಿಗಲ್ಲ. ಪವಿತ್ರವಾದ ಧಾರ್ಮಿಕ ಸಂಸ್ಕಾರವೇ ವಿವಾಹವೆಂಬುವನ್ನು ಜನತೆ ಸರಿಯಾಗಿ ತಿಳಿಯಬೇಕು.

⊕

# ಜಗತ್ತಿನ ಮಾನವರನ್ನು ಆರ್ಯರನ್ನಾಗಿ ಮಾಡುವ ಉಪಾಯಗಳು

❀ ಪಂ॥ ಮಂಜುನಾಥ ಶಾಸ್ತ್ರೀ

**ಇಂದ್ರಂ ವರ್ಧಂತೋ ಅಪ್ತುರಃ ಕೃಣ್ವಂತೋ ವಿಶ್ವಮಾರ್ಯಂ ।**
**ಅಪಘ್ನಂತೋ ಅರಾವ್ಣಃ ॥** ಋಕ್ ೯-೬೩-೫
**ಪವಮಾನಃ ಸೋಮೋ ದೇವತಾ ।**

ಹೇ [ಅಪ್ತುರ] ಸತ್ಕರ್ಮನಿಪುಣ ಸಜ್ಜನರೆ! [ಇಂದ್ರಂ] ಪರಮೈಶ್ವರ್ಯಶಾಲಿಗಳನ್ನು, [ವರ್ಧಂತಃ] ಹೆಚ್ಚಿಸುತ್ತಾ, [ಅರಾವ್ಣಃ] ಪಾಪಿಗಳನ್ನು, [ಅಪಘ್ನಂತಃ] ನಾಶಪಡಿಸುತ್ತಾ, [ವಿಶ್ವಂ] ಇಡೀ ಜಗತ್ತನ್ನು, [ಆರ್ಯಂ] ಆರ್ಯರನ್ನಾಗಿ, [ಕೃಣ್ವಂತಃ] ಮಾಡಿರಿ.

ವೈದಿಕ ಉಪದೇಶಗಳನ್ನನುಸರಿಸಿ ಜಗತ್ತು ಆರ್ಯವಾಗುವ ತನಕ ಜಗತ್ತಿನಲ್ಲಿನ ಈರ್ಷ್ಯಾ ದ್ವೇಷಗಳು, ಅಶಾಂತಿ ಕ್ಷೋಭೆಗಳು ನಾಶವಾಗುವುದು ಕಠಿಣ ಮಾತ್ರವಲ್ಲ, ಅಸಂಭವವಾಗಿದೆ. ಏಕೆಂದರೆ, ಜಗತ್ತಿನ ಎಲ್ಲಾ ಸಂಕೀರ್ಣತೆಗಳು ನಿರ್ಮಲ ಜ್ಞಾನ ಮತ್ತು ಔದಾರ್ಯದಿಂದ ಕೊನೆಗೊಳ್ಳಬಲ್ಲವು. ನಮ್ಮ ಚಿಂತನಶಕ್ತಿಯನ್ನು ನಾವು ಸಂಕುಚಿತವಾಗಿಸಿದಾಗ, ಸೀಮಿತವಾಗಿ ಮಾಡಿದಾಗ ನಮಗೂ, ಬಾವಿಯ ಕಪ್ಪೆಗೂ ಏನೂ ವ್ಯತ್ಯಾಸವಿರುವುದಿಲ್ಲ, ಮಾನವನು ವಿಚಾರಪೂರ್ವಕ ಕಲ್ಯಾಣ ಮಾರ್ಗದ ಪಥಿಕನಾಗಬೇಕೆಂದು ವೇದವು ಸಾರುತ್ತದೆ. ಅವನು ಹಿಂದೂ, ಮುಸ್ಲಿಂ ಅಥವಾ ಕ್ರೈಸ್ತ-ಏನೂ ಆಗದೆ ಬರೇ 'ಮನುಷ್ಯನಾಗಲಿ' ಎಂದು ಗುಡುಗುತ್ತದೆ. ವೇದವೂ ಆರ್ಯನಾಗಲು ಹೇಳುತ್ತದಲ್ಲವೆ? ಎಂದು ತಾವು ಪ್ರಶ್ನಿಸಬಹುದು. ನಿಜ, ಇಲ್ಲಿ ಆರ್ಯನೆಂದರೆ ಯಾವುದೇ ವಿಧವಾದ ಸಂಕುಚಿತ ಸಂಪ್ರದಾಯವನ್ನು ಹೊಂದದೆ ಶ್ರೇಷ್ಠ ಮನುಷ್ಯನಾಗಬೇಕೆಂದು ಅದು ಹೇಳುತ್ತದೆ. **"ಆರ್ಯ ಈಶ್ವರ ಪುತ್ರಃ"** ಆರ್ಯನು ಈಶ್ವರ ಪುತ್ರನು. ಆತ ತಂದೆಯ ಅನುವ್ರತನಾಗಿ ಪ್ರಾಣಿಮಾತ್ರದ ಹಿತಮಾಡಲು ಸೊಂಟ ಕಟ್ಟಿಕೊಳ್ಳುತ್ತಾನೆ.

ವೇದವು ಹೇಳುತ್ತದೆ-**'ಅಹಂ ಭೂಮಿಮದದಾಂ ಆರ್ಯಾಯ'** 'ಈ ಭೂಮಿಯನ್ನು ಆರ್ಯರಿಗೆ ಕೊಡುತ್ತೇನೆ. ನಿಜವಾಗಿ ನೋಡಿದರೆ ಸುಖಶಾಂತಿಗಳನ್ನು ಸ್ಥಾಪಿಸಬೇಕಾದಲ್ಲಿ ಭೂಮಿಯ ಮೇಲೆ ಆರ್ಯರ ಆಧಿಪತ್ಯವಿರಬೇಕು. ಜೀವಮಾತ್ರರ ಸುಖದುಃಖಗಳನ್ನು ನಮ್ಮ ಸುಖದುಃಖಗಳೆಂದು ತಿಳಿದು ವ್ಯವಹರಿಸುವವರೇ ನಿಜವಾದ ಆರ್ಯರು. ಈ ರಹಸ್ಯವನ್ನಿಟ್ಟುಕೊಂಡೇ ವೇದವು **ಕೃಣ್ವಂತೋ ವಿಶ್ವಮಾರ್ಯಂ** ಈ ಪೃಥ್ವಿಯ ಜನರನ್ನೆಲ್ಲಾ ಆರ್ಯರನ್ನಾಗಿ ಮಾಡಿರಿ-ಎನ್ನುತ್ತಿದೆ.

ಈಗ ಆರ್ಯರನ್ನಾಗಿ ಮಾಡುವ ಉಪಾಯವಾವುದು? ಆರ್ಯರಾರು? ಎಂಬ ಪ್ರಶ್ನೆಗಳೆರಡು ತಲೆಯೆತ್ತುತ್ತವೆ. ಈ ಎರಡೂ ಪ್ರಶ್ನೆಗಳಿಗೆ ಸರಿಯಾದ ಉತ್ತರವನ್ನು ಮಂತ್ರದ ಪೂರ್ವಾರ್ಧ ಉತ್ತರಾರ್ಧಗಳಲ್ಲಿ ಕೊಟ್ಟಿರುವರು.

ಮಂತ್ರದಲ್ಲಿ ಹೇಳಿದ ಮೊದಲ ಮಾತು–**ಇಂದ್ರಂ ವರ್ಧಂತಃ** ಇಂದ್ರ ಗುಣಗಳನ್ನುಳ್ಳ ವ್ಯಕ್ತಿಗಳನ್ನು ಸಂರಕ್ಷಿಸಿರಿ, ಅವರನ್ನು ಹೆಚ್ಚಿಸಿರಿ ಮತ್ತು **ಅರಾವ್ಣಃ ಅಪಘ್ನಂತಃ** ಕೃಪಣ, ಅನುದಾರ, ಅದಾನಿ, ಈರ್ಷ್ಯಾಳು ಹಾಗೂ ಸ್ವಾರ್ಥಿಗಳನ್ನು ಸರ್ವಥಾ ಉಚ್ಛೇದಿಸಿರಿ. ಇನ್ನೊಂದು ಮಾತಿನಲ್ಲಿ ಹೇಳಬೇಕಾದರೆ ಇಂದ್ರರೇ ಆರ್ಯರು, ಇತರ ಅದಾನೀ ಆದಿ ದುರ್ಗುಣಗಳನ್ನುಳ್ಳವರು ದಸ್ಯುಗಳು, ಅನಾರ್ಯರು. ಜಗತ್ತಿನಲ್ಲಿ ಶಾಂತಿಯ ಸಾಮ್ರಾಜ್ಯ ಸ್ಥಾಪಿಸಲಿಕ್ಕಾಗಿ ಆರ್ಯರ ವೃದ್ಧಿಯೂ, ದಸ್ಯುಗಳ ನಾಶವೂ ಆಗಬೇಕು.

ಮಂತ್ರದಲ್ಲಿರುವ ಇಂದ್ರ ಶಬ್ದದತ್ತ ಹೆಚ್ಚು ಗಮನವೀಯಬೇಕು. ವೈದಿಕ ವಾಙ್ಮಯದಲ್ಲಿ ಈ ಶಬ್ದವು ವಿಸ್ತೃತ ಕ್ಷೇತ್ರವನ್ನು ಹೊಂದಿಕೊಂಡಿದೆ. ಪ್ರತಿಯೊಂದು ರೀತಿಯ ಉತ್ತಮ ಹಾಗೂ ವಿಶಿಷ್ಟ ಶಕ್ತಿಯನ್ನುಳ್ಳ ಸ್ಥಾವರ ಅಥವಾ ಜಂಗಮ ವಸ್ತುವನ್ನು ನಾವು ಈ ಶಬ್ದದಿಂದ ಕರೆಯಬಹುದು.

ಸಂಸ್ಕೃತ ವ್ಯಾಕರಣಾನುಸಾರ ಪರಮೇಶ್ವರ ಎಂಬ ಅರ್ಥವನ್ನೀಯುವ **ಇದಿ** ಎಂಬ ಧಾತುವಿನಿಂದ ಈ ಶಬ್ದವು ನಿಷ್ಪನ್ನವಾಗಿದೆ. 'ಪರಮ ಐಶ್ವರ್ಯವುಳ್ಳ' ಎಂಬುದೇ ಇಂದ್ರಶಬ್ದದ ಅರ್ಥವಾಯಿತು. ಇಂದ್ರನನ್ನು ಹೆಚ್ಚಿಸಿರಿ ಎಂಬುದಕ್ಕೂ ಪರಮೈಶ್ವರ್ಯಶಾಲಿಗಳನ್ನು ಹೆಚ್ಚಿಸಿರಿ ಎಂಬ ಅರ್ಥವಾಯಿತು.

ಸಾಂಸಾರಿಕ ಧನಧಾನ್ಯಗಳಿಗೆ ಪರಮೈಶ್ವರ್ಯವೆಂಬ ಹೆಸರು ಬರುವುದಿಲ್ಲ. ಅವು ಬಹಳ ಕೆಳಮಟ್ಟದ ಐಶ್ವರ್ಯಗಳಾಗಿವೆ. ಆದುದರಿಂದ ಇಲ್ಲಿ ಈ ಶಬ್ದದ ಮುಖ್ಯ ಅರ್ಥವು ಆತ್ಮಜ್ಞಾನಿಯೆಂದಾಗಬೇಕು. **ಇಂದ್ರ ಆತ್ಮಾ** ಎಂದು ಕಾಶಿಕಾದಲ್ಲಿ ಹೇಳಿದೆ. ಕೋಶಗಳಲ್ಲಿಯೂ ಇದಕ್ಕೆ **ವಿದ್ಯೈಶ್ವರ್ಯ ಯುಕ್ತಂ** ಎಂದು ಹೇಳಿರುವರು.

ಇಂದ್ರನಿಗೆ ಒಂದು ಸಾವಿರ ನೇತ್ರಗಳಿವೆಯೆಂದು ಪೌರಾಣಿಕರು ಕಲ್ಪನೆ ಮಾಡಿರುವರು. ಇದರ ಸಂಗತಿಯನ್ನು ಆಚಾರ್ಯ ಚಾಣಕ್ಯ ತಮ್ಮ ಅರ್ಥಶಾಸ್ತ್ರದಲ್ಲಿ ಈ ರೀತಿ ಮಾಡಿರುವರು–**ಇಂದ್ರಸ್ಯಹಿ ಮಂತ್ರಿಪರಿಷದ್ ಋಷೀಣಾಂ ಸಹಸ್ರಂ । ಸಾ ತಚ್ಚಕ್ಷುಃ। ತಸ್ಮಾದಿದಂ ದ್ವ್ಯಕ್ಷಂ ಸಹಸ್ರಾಕ್ಷಮಾಹುಃ ॥** (ಕೌಟಲ್ಯ ಅರ್ಥಶಾಸ್ತ್ರ ಅಧಿ ೧ ಅಧ್ಯಾಯ ೫) ಅಂದರೆ ಇಂದ್ರನ ಸಚಿವ ಸಂಪುಟದಲ್ಲಿ ಒಂದು ಸಾವಿರ ಋಷಿಗಳಿದ್ದು ಅವರೇ ಆತನ ನೇತ್ರಗಳು. ಆದುದರಿಂದ ಎರಡು ಕಣ್ಣುಗಳನ್ನುಳ್ಳ ಇಂದ್ರನನ್ನು ಒಂದು ಸಾವಿರ ಕಣ್ಣುಳ್ಳವನೆಂದಿದ್ದಾರೆ.

ನಾವು ಇಂದ್ರನೆಂದು ಆತ್ಮಜ್ಞಾನಿಯನ್ನು ಕರೆಯುತ್ತೇವೆ. ಅವನ ಮಾತಿನಲ್ಲಿ ಒಂದು ಸಾವಿರ ಋಷಿಗಳು ಯೋಚಿಸಿದ ಅರ್ಥದಂತೆ ಸಂದೇಹಕ್ಕೆಡೆಯೇ ಇರುವುದಿಲ್ಲ. ಆತ್ಮಜ್ಞಾನಕ್ಕಿಂತ ಹಿರಿದಾದ ಐಶ್ವರ್ಯವಾವುದೂ ಇಲ್ಲ. ಚಾಣಕ್ಯನೇ ತನ್ನ ಸೂತ್ರಗಳಲ್ಲಿ ಬರೆದಿದ್ದಾನೆ–**ಜಿತಾತ್ಮ ಸರ್ವಾರ್ಥೈಃ ಸಂಯುಜ್ಯತೇ** ಜಿತಾತ್ಮನಿಗೆ ಯಾವ ವಸ್ತುವೂ ಅಲಭ್ಯವಲ್ಲ. ರಾಜ್ಯವನ್ನಾಳುವ ಅಧಿಕಾರವನ್ನು ಸಹ ಶಾಸ್ತ್ರಕಾರರು ಜಿತಾತ್ಮನಿಗಿತ್ತಿದ್ದಾರೆ. ಶುಕ್ರಾಚಾರ್ಯ ಈ ಕೆಳಗಿನ ಶಬ್ದಗಳು ಸ್ವರ್ಣಾಕ್ಷರಗಳಲ್ಲಿ ಕೊರೆದಿಡಲು ಯೋಗ್ಯವಾಗಿವೆ.

**ಏಕಸ್ಯೈವಹಿಯೋಽಶಕ್ತೋ ಮನಸಃ ಸನ್ನಿಬರ್ಹಣೇ ।**
**ಮಹೀಂ ಸಾಗರಪರ್ಯಂತಾಂ ಸ ಕಥಂ ಹ್ಯವಜೇಷ್ಯತಿ ॥**

ಒಂದು ಮನಸ್ಸನ್ನೇ ವಶಪಡಿಸಲು ಅಸಮರ್ಥನಾದವನು ಸಾಗರಪರ್ಯಂತವಾದ ಪೃಥ್ವಿಯನ್ನು ಹೇಗೆ ತಾನೇ ವಶದಲ್ಲಿರಿಸಬಲ್ಲನು? ಆದುದರಿಂದ ಜಗತ್ತಿನಲ್ಲಿ ಸುಖಶಾಂತಿಗಳು ಅಭಿವೃದ್ಧಿ ಹೊಂದಬೇಕಾದರೆ ಆರ್ಯರು—ಆತ್ಮಜ್ಞಾನಿಗಳು—ಹೆಚ್ಚಬೇಕು. ಏಕೆಂದರೆ ಆತ್ಮಜ್ಞಾನಿಗಳು ಇಡೀ ವಿಶ್ವವನ್ನು ತಮ್ಮ ಕುಟುಂಬವೆಂದು ತಿಳಿಯುತ್ತಾರೆ. ತನ್ನದು ಬೇರೆಯವರದೆಂಬ ಭಾವನೆ ಅವರೆದುರಿನಲ್ಲಿ ಸುಳಿಯಲಾರದು. ಅವರು ಪಾಪವನ್ನು ತಿರಸ್ಕರಿಸುತ್ತಾರೆಯೇ ಹೊರತು ಪಾಪಿಯನ್ನಲ್ಲ. ಇಂತಹ ವ್ಯಕ್ತಿಗಳೇ ಪ್ರಥಮ ಕೋಟಿಯ ಆರ್ಯರಾಗಿರುವರು.

ಆತ್ಮಜ್ಞಾನದ ಎರಡನೆಯ ಸಂಖ್ಯೆಯಲ್ಲಿ ಇಂದ್ರಶಬ್ದವು ಶಾರೀರಿಕ ಬಲಸಂಪನ್ನರಿಗೆ ಬರುತ್ತದೆ. ಬಲವೂ ಸಹಮಹೈಶ್ವರ್ಯಗಳಲ್ಲೊಂದಾಗಿದೆ, ಛಾಂದೋಗ್ಯೋಪನಿಷತ್ತಿನಲ್ಲಿ (೭. ೮) **ಬಲಂ ವಾವ ವಿಜ್ಞಾನಾದ್ಭೂಯಃ । ಅಪಿ ಶತಂ ವಿಜ್ಞಾನ ವಿತಾಮೇಕೋ ಬಲವಾನಾಕಂಪಯತೇ** ಅಂದರೆ, ನೂರು ಮಂದಿ ಟೊಳ್ಳು ಜ್ಞಾನಿಗಳಿಗಿಂತ ಒಬ್ಬ ಬಲವಂತನೇ ಶ್ರೇಷ್ಠನು ಏಕೆಂದರೆ, ಅವನು ತನ್ನ ಬಲದಿಂದ ಆ ನೂರು ಮಂದಿಯನ್ನು ನಡುಗಿಸುತ್ತಾನೆ. ಆದರೆ, ಆತನ ಬಲವು **ಆರ್ತತ್ರಾಣಾಯ ವಃ ಶಸ್ತ್ರಂ ನಪ್ರಹರ್ತುಮನಾಗಸಿ** ದುಃಖಿತರ ರಕ್ಷಣೆಗಾಗಿದೆಯೇ ಹೊರತು ನಿರ್ದೋಷರನ್ನು ಪೀಡಿಸಲಿಕ್ಕಲ್ಲ. ಮರ್ಯಾದಾ ಪುರುಷೋತ್ತಮನಾದ ರಾಮನು ಹೇಳಿದ್ದಾನೆ—**ಕ್ಷತ್ರಿಯೈರ್ಧಾರ್ಯತೇ ಚಾಪೋ ನಾರ್ತಶಬ್ದೋಭವೇದಿತಿ** ದುಃಖಿತ ಕರುಣಕ್ರಂದನ ಕಿವಿಗಳಲ್ಲಿ ಬೀಳದಿರಲೆಂದೇ ಕ್ಷತ್ರಿಯನು ಧನುಸ್ಸನ್ನು ಎತ್ತುತ್ತಾನೆ. ನಿರ್ಬಲರನ್ನೂ, ಅಸಹಾಯಕರನ್ನೂ ಪೀಡಿಸುವುದರಿಂದ ಶಕ್ತಿಯು ಕ್ಷಯಿಸುತ್ತದೆ. ದೀನರ ಆರ್ತನಾದದಲ್ಲಿ ಅಗ್ನಿಯಂತೆ ಸುಟ್ಟು ಬೂದಿಮಾಡುವ ಶಕ್ತಿಯಿದೆ. ಆದುದರಿಂದ ಬಾಲಕರು, ಸ್ತ್ರೀಯರು, ಗಾಯಗೊಂಡವರು, ನಿಃಶಸ್ತ್ರರು ಹಾಗೂ ದೀನತೆಯನ್ನು ಸಾರುವವರು (ವಿಶಿಷ್ಟ ಸ್ಥಿತಿಯನ್ನು ಬಿಟ್ಟು)-ಇವರನ್ನೆಲ್ಲ ಕೊಲ್ಲುವುದಿಲ್ಲ. ಆದುದರಿಂದ ಲೋಕವ್ಯವಸ್ಥೆಗಾಗಿಯೂ ಇಂದ್ರನಿರುವುದು ಆವಶ್ಯಕವಾಗಿದೆ.

ಮೂರನೆಯ ಸ್ಥಾನದಲ್ಲಿ ಇಂದ್ರಶಬ್ದವು ಸಾಂಸಾರಿಕ ಧನ-ವೈಭವಗಳಿಗೂ ಬರುತ್ತದೆ. ಆದರೆ, ದೀನರೂ, ಪಾತ್ರರಾದವರಿಗೂ ಮಾತ್ರ ತನ್ನ ದಾನಸಂಪತ್ತಿನ ಬಲವನ್ನು ಅಮಂದವಾಗಿಡುವ ಸಿರಿವಂತನನ್ನೇ ಇಂದ್ರನೆನ್ನಲಾಗುವುದು. ಸತ್ಕಾರ್ಯಗಳಲ್ಲಿ ತೊಡಗದ ಸಿರಿವಂತರು **ಅನಿಂದ್ರ**ರಾಗಿರುವರು. ಗಳಿಸುವವನಿಗಿಂತ ಕೊಡುವವನ ಹೃದಯವು ವಿಶಾಲವಾಗಿರಬೇಕೆಂದು ವೇದ ಹೇಳಿದೆ. 'ಶತಹಸ್ತ ಸಮಾಹರ, ಸಹಸ್ರಹಸ್ತ ಸಂಕಿರ' (ಅಥರ್ವ ೩-೨೪-೫). ನೂರು ಕೈಗಳಿಂದ ಗಳಿಸುವೆಯಾದರೆ ಸಾವಿರ ಕೈಗಳಿಂದ ದಾನಮಾಡು.

ವೇದ ಮತ್ತು ಸಂಸ್ಕೃತ ಭಾಷೆಯ **ಅರಾತಿ** ಶಬ್ದವು ಈ ರಹಸ್ಯದ ಮೇಲೆ ಚೆನ್ನಾಗಿ ಬೆಳಕುಬೀರುತ್ತದೆ. ಈ ಕಾಲದಲ್ಲಿ ಈ ಶಬ್ದವು ಶತ್ರು ಎಂಬ ಅರ್ಥದಲ್ಲಿ ರೂಢಿಗೆ ಬಂದಿದೆ. ಪ್ರಾಚೀನ ಕಾಲದಲ್ಲಿಯಂತೂ ಇದು ಲೋಭಿ ಮತ್ತು ದಾನವನ್ನೀಯದವರಿಗಾಗಿ ಪ್ರಯೋಗದಲ್ಲಿತ್ತು. ಕೃಪಣವಾಚಕವಾದ ಈ ಶಬ್ದವು ಶತ್ರು ಎಂಬರ್ಥದಲ್ಲಿ ಏಕೆ ರೂಢವಾಯಿತು? ಎಂಬುದಕ್ಕೂ ಒಂದು ಇತಿಹಾಸವಿದೆ. ಸಂಕಟ ಕಾಲದಲ್ಲಿ ತಮ್ಮ ಹಣವನ್ನುಪಯೋಗಿಸದವರನ್ನು ಸಮಾಜದ ಜನರು ಹೀನಾಯವಾಗಿ ಕಾಣುತ್ತಾ ಅವರೊಂದಿಗೆ ಶತ್ರುವಿನಂತಹ

ವ್ಯವಹಾರ ಮಾಡುತ್ತಾರೆ. ವೇದ ಹೇಳುತ್ತಿದೆ, **ಅಪೃಣನ್ ಮರ್ಡಿತಾರಂ ನ ವಿಂದತೇ** (ಋಗ್ವೇದ ೧೦-೧೧೭-೧) ಇತರರನ್ನು ಸಂತೋಷಗೊಳಿಸದೆ ನೀನು ತನ್ನ ಶುಭಚಿಂತಕನಾಗ ಲಾರೆ. ವೇದಗಳಲ್ಲಿ ಪದೇ ಪದೇ ಇತರರಿಗೆ ಹಿತವಾಗುವಂತಹ ಧನವನ್ನು ಪ್ರಾರ್ಥಿಸಿದ್ದಾರೆ. ಬರೇ ತನ್ನಲ್ಲಿಯೇ ರಮಿಸುವವನನ್ನು **'ಕೇವಲಾಘೋ ಭವತಿ ಕೇವಲಾದೀ** (ಋಗ್ವೇದ ೧೦-೧೧೭-೬) ಅಂದರೆ ಒಬ್ಬಂಟಿಗನಾಗಿ ತಿನ್ನುವವನು ಪಾಪವನ್ನುಣ್ಣುತ್ತಾನೆಂದು ಹೇಳಿರು ವರು. ಸೇವೆ ಮತ್ತು ಉಪಭೋಗಹೀನವಾದ ಧನವನ್ನು ವೇದವು ಕಾವ್ಯಮಯ ಭಾಷೆಯಲ್ಲಿ ಬಾನಿನ ಬಳ್ಳಿ ಎಂದು ಹೇಳಿ ಅದನ್ನು ದೂರ ಬಿಸುಡಲು ಆದೇಶವಿತ್ತಿದೆ.

**ಯಾ ಮಾ ಲಕ್ಷ್ಮೀಃ ಪತಯಾಲೂರಜುಷ್ಟಾ-**
**ಭಿ ಚಸ್ಕಂದ ವಂದನೇವ ವೃಕ್ಷಂ ।**
**ಅನ್ಯತ್ರಾಸ್ಮತ್ ಸವಿತಸ್ತಾಮಿ ತೋ**
**ಧಾ ಹಿರಣ್ಯಹಸ್ತೋ ವಸು ನೋ ರರಾಣಃ ॥** [ಅಥರ್ವ ೭-೧೧೫.೨]

ಹೇ ಪ್ರಭೋ! ಪ್ರೀತಿ ಮತ್ತು ಸೇವೆಯ ಕೆಲಸಕ್ಕೆ ಬಾರದ, ಆದುದರಿಂದಲೇ ನನ್ನನ್ನು ಪತನಕ್ಕೀಡುಮಾಡುವ ಈ ಲಕ್ಷ್ಮಿಯು ನನ್ನನ್ನು ಬಾನಿನ ಬಳ್ಳಿಯಂತೆ ಅಂಟಿ ಕೊಂಡಿದೆ. ಬಾನುಬಳ್ಳಿಯು ವೃಕ್ಷಕ್ಕೇನೂ ಪ್ರಯೋಜನವೀಯದೆ ಅದರ ರಸವನ್ನು ಕುಡಿದು ಕೊನೆಗೆ ಒಣಗಿಸಿಬಿಡುತ್ತದೆ. ಇದೇರೀತಿ, ಸೇವೆ ಮತ್ತು ಪ್ರೇಮದ ಕೆಲಸಕ್ಕೆ ಬಾರದ ಹಣವು ಹಣವಂತನಿಗೇನೂ ಲಾಭವೀಯದೆ ನಿರರ್ಥಕವಾಗಿ ಚಿಂತಾಭಾರವನ್ನು ಹೆಚ್ಚಿಸಿ ಆತನ ಮೃತ್ಯುವಿಗೆ ಕಾರಣವಾಗಿಬಿಡುತ್ತದೆ. ಆದುದರಿಂದಲೇ ಮಂತ್ರದ ಉತ್ತರಾರ್ಧದಲ್ಲಿ ಪ್ರಾರ್ಥಿಸಿ ದ್ದಾರೆ. ಪ್ರಭುವೆ! ಇಂತಹ ಹಣವನ್ನು ನನ್ನಿಂದ ದೂರವಿಟ್ಟು ವಸ್ತು ಅಂದರೆ ಜಗತ್ತಿಗೆ ವಾಸವನ್ನೀಯುವಂತಹದು, ಭಗ್ನವಾಗಿಸುವಂತಹದಲ್ಲ–ಅಂತಹದನ್ನು ಕೊಡು. ಈ ರೀತಿ ಈ ಮೂರನೆಯ ವಿಧವಾದ ಇಂದ್ರರ ಆವಶ್ಯಕತೆಯೂ ಸಹ ಜಗತ್ತಿಗಿದೆ.

ಇನ್ನೊಂದು ಪ್ರಶ್ನೆಯೇಳುತ್ತದೆ–ಈ ಮೂರೂ ವಿಧವಾದ ಇಂದ್ರರೆಂತು ಹೆಚ್ಚಲಿ? ಅದಕ್ಕೆ ಮಂತ್ರದಲ್ಲಿ ಹೇಳಿದೆ–**ಅರಾವ್ಣಃ ಅಪಘ್ನಂತಃ** ಅಂದರೆ ಆದಾತಾ ಮತ್ತು ಈರ್ಷ್ಯಾಳು ಸ್ವಾರ್ಥಿಗಳನ್ನು ನಾಶಮಾಡಿರಿ. ಇಂದ್ರರು ಹೆಚ್ಚುವುದರಿಂದ ಜಗತ್ತಿನಲ್ಲಿ ಶಾಂತಿ ಸುಖಗಳು ತಳವೂರುವುದಾದರೆ ದಸ್ಯುಗಳ ವಿನಾಶದಿಂದಲೂ ಶಾಂತಿಯ ಸ್ಥಾಪನೆಯಾಗುವುದು.

ಬೇರೆ ಶಬ್ದಗಳಲ್ಲಿ ಸಾರವಿಷ್ಟೇ–ಜಗತ್ತಿನಲ್ಲಿ ಉನ್ನತ ಮಟ್ಟದ ಬ್ರಾಹ್ಮಣರು, ಉಚ್ಚಕೋಟಿಯ ಕ್ಷತ್ರಿಯರು ಹಾಗೂ ಮೇಲ್ಮಟ್ಟದ ವೈಶ್ಯರು ಹೆಚ್ಚಬೇಕು. ಮಂತ್ರದಲ್ಲಿನ **ವರ್ಧಂತಃ** ಶಬ್ದದ ಮೂಲಕ ಯಾವ ರಾಷ್ಟ್ರದಲ್ಲಿಯೂ ಶೂದ್ರರ ಸಂಖ್ಯೆ ಕಡಿಮೆಯಿರಬೇಕೆಂದು ಧ್ವನಿತವಾಗುತ್ತದೆ. ಅಂದರೆ, ಅವರು ತಮ್ಮ ಯೋಗ್ಯತೆಗೆ ಅನುಸಾರವಾಗಿ ವೈಶ್ಯಕ್ಷತ್ರಿಯ ಬ್ರಾಹ್ಮಣರಾಗಲು ಸಂದರ್ಭವೊದಗಬೇಕು. ಮನುವೂ ಹೇಳಿದ್ದಾನೆ.

**ಯದ್ರಾಷ್ಟ್ರಂ ಶೂದ್ರ ಭೂಯಿಷ್ಠಂ ನಾಸ್ತಿಕಾಕ್ರಾಂತ ಮದ್ವಿಜಂ ।**
**ವಿನಶ್ಯತ್ಯಾಶು ತತ್ಸರ್ವಂ ದುರ್ಭಿಕ್ಷವ್ಯಾಧಿಪೀಡಿತಂ ॥** [ಮನು ೮-೨೨]

ಶೂದ್ರರೂ ನಾಸ್ತಿಕರೂ ಹೆಚ್ಚಿದ ರಾಷ್ಟ್ರವು ಬೇಗನೇ ವಿನಾಶಕ್ಕೀಡಾಗುತ್ತದೆ. ದುರ್ಭಿಕ್ಷವೂ, ರೋಗಗಳೂ ಹರಡುತ್ತವೆ. ಏಕೆಂದರೆ, ಪವಿತ್ರತೆ ಮತ್ತು ಕರ್ತವ್ಯಭಾವನೆ ಯುಳಿದಿರುವುದಿಲ್ಲ.



# ನಡೆ ಮುಂದೆ ನಡೆ ಮುಂದೆ.......

## ⊕ ಪ್ರೊ|| ಸುರೇಶಚಂದ್ರ ವೇದಾಲಂಕಾರ

ಜೀವನ ಎಂದರೇನು? ಸಾಮವೇದದ ಒಂದು ಮಂತ್ರದಲ್ಲಿ ಜೀವನವನ್ನು ಒಂದು ಯಾತ್ರೆಯೆಂದು ಪರಿಗಣಿಸಲಾಗಿದೆ. ನೋಡಿ:—

**ಪ್ರದೈವೋದಾಸೋ ಅಗ್ನಿರ್ದೇವ ಇಂದ್ರೋ ನ ಮಜ್ಮನಾ |**
**ಅನು ಮಾತರಂ ಪೃಥಿವೀಂ ವಿವಾವೃತೇ ತಸ್ಥೌ ನಾಕಸ್ಯ ಶರ್ಮಣಿ ||**

[ಸಾಮ:-೧-೧-೫-೭]

ಅರ್ಥಾತ್, ಈ ಪೃಥ್ವೀ ಮಾತೆಯ ಹತ್ತಿರ ವಾಸಿಸಿದ ನಂತರ ಎಲ್ಲಾ ಜನರೂ ಹಿಂದಿರುಗುತ್ತಾರೆ. ಇದು ನಮ್ಮ ಮನೆಯಲ್ಲ, ಇದು ನಮ್ಮ ಲಕ್ಷ್ಯವಲ್ಲ; ನಮ್ಮ ಮನೆ ಬ್ರಹ್ಮ ಲೋಕವಾಗಿದೆ. ನಮ್ಮೆಲ್ಲರಿಗೂ ಅಲ್ಲೇ ಹೋಗಲಿಕ್ಕಿದೆ. ಉರ್ದೂ ಕವಿಯೊಬ್ಬ ಹೇಳುತ್ತಾನೆ:-

**ಹರ್ ಸುಬಹ್ ಸಫರ್ ಹರ್ ಶಾಮ್ ಸಫರ್ |**
**ಇಸ್ ಜೀವನ್ ಕಾ ಹೈ ನಾಮ್ ಸಫರ್ |**

"ಎಲ್ಲ ಬೆಳಗುಗಳೂ ಯಾತ್ರೆ; ಎಲ್ಲ ಸಂಜೆಗಳೂ ಯಾತ್ರೆ. ಈ ಜೀವನಕ್ಕಿರುವ ಹೆಸರೇ ಯಾತ್ರೆ".

ಕೆಲವರು ಇದು ಯಾತ್ರೆಯೆಂದು ತಿಳಿಯದೆ ಯಾತ್ರೆಯ ಸಾಧನವೆಂದು ಹೇಳುತ್ತಾರೆ. ಈ ಯಾತ್ರೆಯು ಬಿರುಗಾಳಿಯ ಬಿರುಸಿನಿಂದಲೂ, ಸುಳಿಗಾಳಿಯ ತೀಕ್ಷ್ಣತೆಯಿಂದಲೂ ಸಾಗುತ್ತಿರುತ್ತದೆ. ಮನುಷ್ಯನು ಇದರ ಮೇಲೆ ಸವಾರಿ ಮಾಡತಕ್ಕದ್ದು. ವೇದವೇ ಒಂದೆಡೆ ಹೇಳಿರುವಂತೆ—

**ಸುತ್ರಾಮಾಣಂ ಪೃಥಿವೀಂ ದ್ಯೈವೀಂ ನಾವಂ |**

"ಈ ಮಾನವ ಶರೀರವು ಒಂದು ದಿವ್ಯ ನೌಕೆ. ಇದರಲ್ಲಿ ಕುಳಿತೇ ನಿನ್ನ ಪ್ರಾಪಂಚಿಕ ಯಾತ್ರೆಯನ್ನು ಪೂರ್ಣಗೊಳಿಸು."

ಒಂದು ಆಂಗ್ಲ ಕವಿತೆಯಲ್ಲಿ ಜೀವನದ ಬಗ್ಗೆ ಸುಂದರವಾದ ವರ್ಣನೆ ಕಂಡುಬರುತ್ತದೆ. ಒಮ್ಮೆ ಹಕ್ಕಿಗಳೆಲ್ಲಾ ಹಾಡುವುದನ್ನು ನಿಲ್ಲಿಸಿ ನೀರವತೆಯ ವಾತಾವರಣವನ್ನುಂಟುಮಾಡಿದವು. ಒಂದು ಬುಲ್‌ಬುಲ್ ಹಕ್ಕಿಯು ನೀರವತೆಯನ್ನು ಬೇಧಿಸಿ ತನ್ನ ಮಧುರ ಕಂಠದಿಂದ ಉಲಿಯಿತು—'ಜೀವನ ಎಂದರೇನು?'

ಇದ್ದಕ್ಕಿದ್ದಂತೆಯೇ ಮೂಡಿಬಂದ ಪ್ರಶ್ನೆ ಹಕ್ಕಿಗಳನ್ನು ಬೆದರಿಸಿತು. ಸ್ವಲ್ಪಕಾಲ ಸುಧಾರಿಸಿಕೊಂಡ ನಂತರ ಕೋಗಿಲೆಯು ಉತ್ತರಿಸಿತು—"ಜೀವನವೆಂದರೆ ಒಂದು ಸಂಗೀತ."

"ಇಲ್ಲ, ಇಲ್ಲ, ಜೀವನವೆಂದರೆ ಅಂಧಕಾರದಲ್ಲಿ ಹೋರಾಟ"–ಗೂಡಿನಿಂದ ಹೊರ ಬರುತ್ತಾ ಗೂಬೆಹಕ್ಕಿ ನುಡಿಯಿತು.

"ಜೀವನ ಕೇವಲ ಕಠಿಣ ಶ್ರಮ ಮತ್ತು ಕಾರ್ಯ" ಗೀಜಗ ಹಕ್ಕಿಯು ತನ್ನ ಕೊಕ್ಕಿನಿಂದ ಹುಲ್ಲನ್ನು ಕೀಳುತ್ತಾ ಹೇಳಿತು.

"ಜೀವನವೆಂದರೆ ಕಣ್ಣೀರಲ್ಲದೆ ಬೇರೆಯಲ್ಲ." ದೊಡ್ಡ ದೊಡ್ಡ ನೀರ ಹನಿಗಳು ಆಗಸದಿಂದ ಉದುರುತ್ತಾ ಸಾರಿದವು.

"ನೀನು ಹೇಳುವುದು ಸರಿಯಲ್ಲ. ಜೀವನವೆಂದರೆ ಸ್ವತಂತ್ರತೆ ಮತ್ತು ಶಕ್ತಿ." ದೂರದ ಆಗಸದಲ್ಲಿ ಹಾರುತ್ತಿದ್ದ ಹದ್ದು ಹೇಳಿತು.

"ನನ್ನ ಅಭಿಪ್ರಾಯದಲ್ಲಿ ಜೀವನವೆಂದರೆ ವಿಕಾಸ" ಗುಲಾಬಿಯು ತನ್ನ ಎಸಳನ್ನು ಅರಳಿಸುತ್ತಾ ಉಲಿಯಿತು.

ಭ್ರಮರವೊಂದು ತಾವರೆಪುಷ್ಪದ ಬಟ್ಟಲಿನಲ್ಲಿ ಕುಳಿತು ಮಧುವನ್ನೀಂಟುತ್ತಾ ನುಡಿಯಿತು—"ಜೀವನವೊಂದು ಆನಂದ."

ಪ್ರಾತಃಕಾಲದಲ್ಲಿ ದೀಪವನ್ನು ಆರಿಸುತ್ತಾ, ತಾನು ಓದುತ್ತಿದ್ದ ಪುಸ್ತಕವನ್ನು ಮುಚ್ಚಿಡುತ್ತಾ ವಿದ್ಯಾರ್ಥಿಯು ಹೇಳಿದ—"ಜೀವನವೆಂದರೆ ಒಂದು ಪಾಠಶಾಲೆ."

ರಾತ್ರಿಯಿಡೀ ಭೋಗವಿಲಾಸಗಳಲ್ಲಿ ಮುಳುಗಿದ್ದ ವಿಲಾಸಪ್ರಿಯನೊಬ್ಬ ಮಬ್ಬಿನಲ್ಲಿ, ಮತ್ತಿನಲ್ಲಿಯೋ ಎಂಬಂತೆ ಉದ್ಗರಿಸಿದ—"ಜೀವನವೆಂದರೆ ಒಂದು ಅತೃಪ್ತ ಆಕಾಂಕ್ಷೆ."

ಸ್ಫೂರ್ತಿದಾಯಕವಾದ ಪ್ರಾತಃಕಾಲೀನ ವಾಯು ನಿಧಾನವಾಗಿ ಉಸುರಿತು—"ಜೀವನ ಒಂದು ಗೂಢ ರಹಸ್ಯ."

ಸೂರ್ಯೋದಯ, ಹಗುರವಾಗಿ ತೇಲಿಹೋಗುತ್ತಿರುವ ಮೋಡ, ಸ್ವರ್ಣರಂಜಿತ ಮರಗಳ ಚಿಗುರು,—ಇವು ಮೇಲೆ ಏಳುತ್ತಾ ಪೃಥ್ವಿಯ ಸಂಪರ್ಕ ಮಾಡುತ್ತಾ ಲಯಬದ್ಧವಾಗಿ ಉಲಿದವು—"ಜೀವನವೊಂದು ಆರಂಭ."

ಈ ಆಂಗ್ಲ ಕವಿತೆಯನ್ನು ಓದಿದಾಗ, ಪ್ರತಿಯೊಬ್ಬರಿಗೂ ತನ್ನ ಪರಿಸ್ಥಿತಿಯ ಆಧಾರದಲ್ಲಿ ಯಾವ ಚಿತ್ರ ಎದುರಿಗೆ ಬರುತ್ತಿದೆಯೋ ಅವರ ದೃಷ್ಟಿಯಲ್ಲಿ ಅದೇ ಜೀವನ—ಎಂಬ ಅನುಭವವುಂಟಾಗುತ್ತದೆ. ನನ್ನ ದೃಷ್ಟಿಯಲ್ಲಿ ತನ್ನ ಲಕ್ಷ್ಯದತ್ತ ಮುಂದುವರಿಯಲು ಇಡುವ ಒಂದೊಂದು ಹೆಜ್ಜೆಯ ಉಪಕ್ರಮವೇ ಜೀವನ.

ಕವಿವರ ರವೀಂದ್ರನಾಥ ಠಾಕೂರರ ದರ್ಶನಕ್ಕೆಂದು ಗುರುಕುಲ ಕಾಂಗಡಿಯ ಕೆಲವು ವಿದ್ಯಾರ್ಥಿಗಳು ಅವರ ಶಾಂತಿನಿಕೇತನಕ್ಕೆ ತೆರಳಿದರು. ಸಂದರ್ಶನಕ್ಕೆ ಅನುಮತಿ ದೊರೆಯಿತು. ಮಧ್ಯಾಹ್ನದ ಸಮಯವದು. ಗುರುದೇವರು ಆರಾಮಾಸನದಲ್ಲಿ ಮಂಡಿಸಿದ್ದರು. ಪಕ್ಕದಲ್ಲಿ ಒಂದು ತ್ರಿಪಾದಿ (ಮೂರು ಕಾಲಿನ ಒಂದು ಚಿಕ್ಕ ಮೇಜು) ಇತ್ತು. ಆ ತ್ರಿಪಾದಿ ಅಥವಾ ಸ್ಟೂಲ್‌ನ ಮೇಲೆ ಅಂಟಿಕೊಂಡು ಕಾಗದವಿತ್ತು. ಆ ಕಾಗದ ಮೇಲೆ ನೊಣಗಳು ಸೇರುತ್ತಿದ್ದವು; ಗುಂಯ್ ಎಂದು ಶಬ್ದ ಮಾಡುತ್ತಾ ಸ್ವಲ್ಪ ಸಮಯದ ನಂತರ ಜಾರಿ ಹೋಗುತ್ತಿದ್ದವು. ಬಹಳ ಪ್ರಯತ್ನದ ನಂತರ ಜಾರಿಹೋದರೂ ಮತ್ತೆ ಮತ್ತೆ ಪ್ರಯತ್ನಿಸುತ್ತಿದ್ದವು. ಒಳಗೆ ಬಂದವರಿಗೆ ಈ ನೊಣಗಳ ಕಸರತ್ ದೃಶ್ಯ ಅಪ್ರಿಯವಾಗಿ ಕಂಡಿತು. ಓರ್ವ ವಿದ್ಯಾರ್ಥಿ ಸ್ಟೂಲನ್ನು ಅಲ್ಲಿಂದ ತೆಗೆದುಬಿಡಲು ಮುಂದಾದ, ಆದರೆ ಕವಿವರ್ಯರ ಆಪ್ತ ಕಾರ್ಯದರ್ಶಿ ಹಾಗೆ ಮಾಡದಿರಲು ಸಂಕೇತದಿಂದ ಸೂಚಿಸಿದನು. ಕಾರಣವೇನೆಂದು ಅವರಿಗೆ ತಿಳಿಯಲಿಲ್ಲ. ವಿದ್ಯಾರ್ಥಿಗಳಲ್ಲೊಬ್ಬ ಆ ಟೀಪಾಯಿಯ ಕಡೆ

ತೋರಿಸಿ, ಕವಿವರ್ಯರ ಮುಂದೆ ತನ್ನ ಜಿಜ್ಞಾಸೆಯನ್ನು ಪ್ರಕಟಿಸಿದನು. ಗುರುದೇವರು ಮುಗುಳ್ನಕ್ಕರು. ಕವಿಯು ಕ್ರಾಂತದರ್ಶಿ, ಕವಿಹೃದಯವು ಪ್ರತಿಯೊಂದು ವಸ್ತುವಿನ ಅಂತರಾಳವನ್ನು ಪ್ರವೇಶಿಸಿ ಅದರ ವಾಸ್ತವಿಕತೆಯನ್ನು ಅರಿಯಲು ಯತ್ನಿಸುತ್ತದೆ. ಮುಗುಳ್ನಗುತ್ತಾ ಹೇಳಿದರು—"ಮಾನವ ಜೀವನದ, ಪ್ರಾಣಿಮಾತ್ರದ ಉದ್ದೇಶ್ಯವೇನು?—ಎಂದು ಗಮನಿಸುತ್ತಿದ್ದೇನೆ. ಮಾನವ ಜೀವನದ ಧ್ಯೇಯ ಆತ್ಮಸಂತೋಷ. ಆತ್ಮಸಂತೋಷಕ್ಕೆ ಮಾನವೀಯ ಸಾಮರ್ಥ್ಯದ ವಿಕಾಸ ಅಗತ್ಯ. ಸಾಮರ್ಥ್ಯದ ವಿಕಾಸ ಸಾಧನೆಯಿಂದ ಮಾತ್ರ ಸಾಧ್ಯ. ತಪಸ್ಸಿಲ್ಲದೆ ಸಾಧನೆ ಸಾಧ್ಯವಿಲ್ಲ. ತಪಸ್ಸಿಗಾಗಿ ಆತ್ಮಿಕಬಲದ ಸಂಪಾದನೆ ಅಗತ್ಯವಿದೆ. ನೀವು ನಿಮ್ಮ ಜೀವನದ ಧ್ಯೇಯ ಯಾವುದನ್ನೇ ಮಾಡಿಕೊಳ್ಳಿರಿ, ಅದರ ಸಿದ್ಧಿಗಾಗಿ ಆಳವಾದ ಸಾಧನೆ, ನಿರಂತರ ಪರಿಶ್ರಮ ಮಾಡಬೇಕಾಗುತ್ತದೆ. ಪರಿಶ್ರಮವಿಲ್ಲದೆ ಮನುಷ್ಯನು ಜೀವನದಲ್ಲಿ ಮುಂದುವರಿಯಲಾರನು. ಯಾತ್ರೆ ಪ್ರಾರಂಭಿಸಿದರೂ ಮುಂದೆ ಸಾಗಲಾರನು. ತಮ್ಮ ಜೀವನದಲ್ಲಿ ಏನಾದರೂ ಒಂದು ಧ್ಯೇಯ ಮಾಡಿಕೊಂಡು ಸಾಧನೆ, ತಪಸ್ಸು ಮತ್ತು ಆತ್ಮಬಲದ ಮೂಲಕ ತನ್ನ ಲಕ್ಷ್ಯವನ್ನು ತಲುಪಬಲ್ಲನು. ಜೀವನದಲ್ಲಿ ಸೋಲನ್ನು ಒಪ್ಪಿಕೊಳ್ಳಲೇಬಾರದು. ಈ ನೊಣಗಳನ್ನು ನೋಡಿರಿ. ಈ ಕಾಗದದಿಂದ ಮುಕ್ತವಾಗಲು ಅದೆಷ್ಟು ಸಾಧನೆ, ಪ್ರಯತ್ನ ಮತ್ತು ಆತ್ಮವಿಶ್ವಾಸಗಳನ್ನು ತೋರಿಸುತ್ತವೆ. ಇದೇ ರೀತಿ ಮನುಷ್ಯನ ಜೀವನದಲ್ಲಿ ಸಫಲನಾಗಲು ಸಾಧನೆ, ತಪಸ್ಸು ಮತ್ತು ಆತ್ಮಬಲಗಳ ಸಹಾಯ ಪಡೆಯಬೇಕು."

ಪ್ರತಿಯೊಬ್ಬ ಮನುಷ್ಯನಲ್ಲಿಯೂ ಒಂದು ಈಶ್ವರೀಯ ಶಕ್ತಿಯೆಂಬುದು ಇರುತ್ತದೆ. ಅದು ಯಾವುದೇ ಕಾರ್ಯವೆಸಗಲು ಬೇಕಾದ ಆತ್ಮವಿಶ್ವಾಸವಾಗಿದೆ. ಆತ್ಮವಿಶ್ವಾಸದ ವಿರೋಧೀ ಭಾವನೆಯೆಂದರೆ ನಿರಾಶೆ. ನಿರಾಶೆಯು ಪೌರುಷದ ಅಪಮಾನವಾಗಿದೆ. ಪರಿಸ್ಥಿತಿಗಳು ನಿಮ್ಮನ್ನು ವಶದಲ್ಲಿರಿಸಿಕೊಳ್ಳುವುದೆಂದರೆ ನಿಮ್ಮ ಅಪಮಾನವಾದಂತೆಯೇ ಸರಿ. ನೀವೆಷ್ಟೇ ಚಿಕ್ಕವರಾಗಲಿ, ಎಷ್ಟೇ ದುರ್ಬಲರಾಗಿರಿ, ಒಂದೊಮ್ಮೆ ಈಶ್ವರ ಶಕ್ತಿಯೊಂದಿಗೆ ನಿಮ್ಮ ಸಂಬಂಧವನ್ನು ಅನುಭವ ಮಾಡಿಕೊಳ್ಳತೊಡಗಿದರೆಂದರೆ ತಮಗೆ ಅಪೂರ್ವ ಆತ್ಮಬಲದ ಉದಯವಾಗುತ್ತದೆ. ಆ ಸಮಯದಲ್ಲಿ ನೀವು ಪರಿಶ್ರಮ ಮತ್ತು ಸಾಧನೆಯ ಮೂಲಕ ಆತ್ಮಸಂತೋಷವನ್ನು ಹೊಂದಬಲ್ಲಿರಿ.

ನಾವು ಹೋರಾಟದಲ್ಲಿ ಗಾಬರಿಯಾಗತೊಡಗಿದೆವೆಂದರೆ, ಕಾರ್ಯವು ನಿಲ್ಲುವ ಪ್ರಸಂಗ ಬಂದರೆ ಅದನ್ನು ದೂರ ಮಾಡುವ ಪ್ರಯತ್ನ ಮಾಡುವುದಗತ್ಯ. ನಿಮ್ಮ ಶರೀರದಲ್ಲಿ, ಯಾವುದೇ ಕೆಡುಕು ಅಥವಾ ನಿರಾಶೆಯ ಎದುರಿಗಾಗಲಿ ಸೋಲನ್ನೊಪ್ಪದ ಅಲೌಕಿಕ ಶಕ್ತಿಯಿದೆ ಎಂಬುದನ್ನು ನೀವು ಮನಗಾಣಬೇಕು. ಈಶ್ವರೀಯ ಶಕ್ತಿಯು ನನ್ನಲ್ಲಿರುವುದೆಂದು ದೃಢವಾಗಿ ನಂಬುವುದಾದರೆ, ಈಶ್ವರನು ನನ್ನನ್ನು ಮಾಡಿರುವುದರಿಂದ ಆತನ ಗುಣವೂ ನನ್ನಲ್ಲಿ ಅಗತ್ಯ ಇರಲೇಬೇಕೆಂದು ಭಾವಿಸುವುದರಿಂದ ಕೆಡುಕನ್ನು ನಿವಾರಿಸುವ ಶಕ್ತಿ ಅಗತ್ಯವಾಗಿ ಮೂಡುತ್ತದೆ. ಅನಿಷ್ಟವು, ಕೆಡುಕು ನನ್ನ ಭವಿಷ್ಯವನ್ನು ಅಂಧಕಾರ ಪೂರ್ಣಮಾಡುವುದಾದರೆ ಅದು ನನ್ನ ಪೌರುಷಕ್ಕೇ ಅಪಮಾನ, ನನ್ನ ಉತ್ಥಾನಕ್ಕೆ ತಡೆಯಾಗುತ್ತದೆ. ನಾನು ಈ ಜೀವನವನ್ನು ಅಂಧಕಾರಪೂರ್ಣವನ್ನಾಗಿ, ವಿನಾಶಕಾರಿಯನ್ನಾಗಿ ಮಾಡಲು ಬಿಡುವುದಿಲ್ಲ. ಇನ್ನೆಂದೂ ಈ ದುರಿತವು ನನ್ನ ಜೀವನವನ್ನು ಹಾಳುಗೆಡವಲು ಅವಕಾಶ

ಕೊಡಲಾರೆ—ಎಂಬುದಾಗಿ ಪ್ರತಿಜ್ಞೆ ಮಾಡುತ್ತೇನೆ. ನಿಷ್ಕ್ರಿಯತೆಯನ್ನು ನನ್ನ ಹೃದಯ ದಿಂದ ಹೊರದೂಡುತ್ತೇನೆ. ಈ ಅಕರ್ಮಣ್ಯತೆಯು ನನ್ನ ದೈವೀಗುಣಗಳಿಗೆ ಘಾತಕವಾಗಿದೆ. ಇದು ಜೀವನವಿಡೀ ಮುಂದುವರಿಯದಂತೆ, ಅಸಫಲತೆಯ ಗಹ್ವರದಲ್ಲಿ ಹುಗಿದಿಡುತ್ತದೆ. ಆದ್ದರಿಂದ ನಾನು ಈ ಆಲಸ್ಯ—ನಿಷ್ಕ್ರಿಯತೆಯನ್ನು ಪೂರ್ಣವಾಗಿ ತೊಲಗಿಸುತ್ತೇನೆ.

ಥಾಮಸ್ ಆಲ್ವ ಎಡಿಸನ್‌ನು ತನ್ನ ಮಿತ್ರರ ಮದ್ಯಪಾನದ ಆಗ್ರಹದಿಂದ, ಒತ್ತಾಯ ದಿಂದ ಹೇಗೆ ಪಾರಾದೆನೆಂದು ತಿಳಿಸುತ್ತಾ ಬರೆದಿದ್ದಾನೆ—"ನಾನು ಈ ಬಗ್ಗೆ ಮೊದಲು ಚೆನ್ನಾಗಿ ವಿಚಾರಮಾಡಿದೆ. ನಾನು ನನ್ನ ಸಂಪೂರ್ಣ ಶಾರೀರಿಕ ಹಾಗೂ ಮಾನಸಿಕ ಶಕ್ತಿಗಳ ಲಾಭ ಪಡೆಯಲು ಯತ್ನಿಸುತ್ತಿದ್ದೆ. ಮದ್ಯದಂತಹ ಘೋರಶತ್ರುವನ್ನು ಸೇವಿಸಿ ನನ್ನ ಭವಿಷ್ಯವನ್ನು ಅಂಧಕಾರಮಯವನ್ನಾಗಿಸಿಕೊಳ್ಳಲು, ನಿಷ್ಕ್ರಿಯಗೊಳಿಸಿಕೊಳ್ಳಲು ಎಂದಿಗೂ ಇಚ್ಛಿಸಲಿಲ್ಲ. ಆದ್ದರಿಂದ ಮಾನವನ ಮಹಾನ್ ಶತ್ರುವಾದ ಈ ಮದ್ಯವನ್ನೆಂದೂ ಮುಟ್ಟುವುದಿಲ್ಲವೆಂದು ದೃಢನಿಶ್ಚಯ ಮಾಡಿದೆ." ಇದೇ ಎಡಿಸನ್‌ನು ಗ್ರಾಮಾಫೋನ್, ವಿದ್ಯುತ್‌ದೀಪ ಮುಂತಾದ ಅನೇಕ ಉಪಯುಕ್ತ ವಸ್ತುಗಳನ್ನು ಸಂಶೋಧಿಸಿ ಪರಮೇಶ್ವರನ ಅಗ್ನಿರೂಪದ ಉಪಾಸನೆ ಮಾಡಿದನು. ಜೀವನದಲ್ಲಿ ಸತತವಾಗಿ ಮುಂದುವರಿಯಲು ಇದೇ ಮಾರ್ಗವಾಗಿದೆ.

ಪ್ರತಿಯೊರ್ವ ಮನುಷ್ಯನೂ ಈಶ್ವರೀಯ ಶಕ್ತಿಯ, ದಿವ್ಯಶಕ್ತಿಗಳ ಸ್ವಾಮಿಯಾಗಿ ದ್ದಾನೆ. ಅವನು ತನ್ನ ಈ ಶಕ್ತಿಯನ್ನು ಅರಿತುಕೊಂಡನೆಂದರೆ ಜಗತ್ತಿನಲ್ಲಿ ಆಶ್ಚರ್ಯಜನಕ ಕಾರ್ಯಗಳನ್ನೆಸಗಬಲ್ಲನು. ಯಾವನಿಗೆ ಈ ತನ್ನ ಶಕ್ತಿಗಳ ಅರಿವಿಲ್ಲವೋ ಅವನಿಗೆ ಅತ್ಯುತ್ತಮ ಸೌಭಾಗ್ಯದ ಅವಕಾಶಗಳು ಬಂದಾಗಲೂ ಅದನ್ನು ಕಳೆದುಕೊಳ್ಳುತ್ತಾನೆ. ಈ ಜಗತ್ತು ಕರ್ಮಶೀಲ ವ್ಯಕ್ತಿಗಳಿಗಲ್ಲದೆ, ಆಲಸಿಗಳಿಗಲ್ಲ. ಯಾರು ಕರ್ತೃತ್ವಶಾಲಿಗಳಾಗಿರುತ್ತಾರೋ ಅವರೇ ಜಗತ್ತಿನ ನೇತಾರರಾಗಿದ್ದಾರೆ. ಫೋರ್ಡ್ ಮೋಟಾರು ಗಾಡಿಗಳ ಸ್ವಾಮಿ ಹೆನ್ರಿ ಫೋರ್ಡ್‌ನ ಪ್ರಾರಂಭಿಕ ಜೀವನ ಅತ್ಯಂತ ನಿರ್ಧನತೆಯಿಂದ (ದಾರಿದ್ರ್ಯ) ಕೂಡಿತ್ತು. ನೆರೆ ಹೊರೆಯವರೆಲ್ಲರೂ ಅವನನ್ನು ಅತ್ಯಂತ ಹೆಡ್ಡನೆಂದು ಪರಿಗಣಿಸಿದ್ದರು. ಓರ್ವ ಹೆಡ್ಡ (ಬೆಪ್ಪ) ವಿದ್ಯಾರ್ಥಿಯೆಂದು ಪರಿಗಣಿಸಲ್ಪಟ್ಟು ಶಾಲೆಯಿಂದ ಹೊರಬಂದ; ಓರ್ವ ಹೆಡ್ಡ ಕಾರ್ಮಿಕನಂತೆ ಕಾರ್ಖಾನೆಯೊಂದರಲ್ಲಿ ವಾರಕ್ಕ ೧೦ ಡಾಲರ್ ಸಂಬಳದಲ್ಲಿ ಕೆಲಸಮಾಡಿದ; ಓರ್ವ ಹೆಡ್ಡನಂತೆಯೇ ಕೃಷಿಕಾರ್ಯಗಳನ್ನು ನಡೆಸಿದ. ಅವನ ಹೆಂಡತಿಯ ದೃಷ್ಟಿಯಲ್ಲೂ ಅವನೊಬ್ಬ ಹೆಡ್ಡನಾಗಿದ್ದ. ಒಂದು ದಿನ ಕೃಷಿ ವಾರ್ತಾ ಪತ್ರಿಕೆ ಓದುತ್ತಿದ್ದಾಗ ಕುದುರೆ ಯಿಲ್ಲದೆ ಓಡುವ ಗಾಡಿಯ ಚಿತ್ರವೊಂದನ್ನು ನೋಡಿದ. ಅಂತಹದೇ ಗಾಡಿಯ ಚಿತ್ರ ರಚಿಸಲು ಪ್ರಾರಂಭಿಸಿದನು. ಆ ಕೆಲಸಗಳನ್ನು ನೋಡಿದ ಅವರ ಪತ್ನಿಯು ಅವನನ್ನು ಅಪ ಹಾಸ್ಯ ಮಾಡುತ್ತಿದ್ದಳು. ಒಂದು ದಿನ ಅವನು ಗಾಡಿಗೆ ಒಂದು ಹಳೆಯ ಇಂಜಿನ್ ಜೋಡಿಸಿ ಗಾಡಿ ತಯಾರಿಸಿ ವಿಚಿತ್ರ ಶಬ್ದಮಾಡುತ್ತಾ ಓಡುತ್ತಿದ್ದ ಅವನ ಆ ಗಾಡಿಯನ್ನು ನೋಡಿ ಜನರು ಬಿದ್ದು ಬಿದ್ದು ನಗುತ್ತಿದ್ದರು. ಹುಡುಗರು ಅವನತ್ತ ಕಲ್ಲು ಹಾಗೂ ಧೂಳನ್ನು ಎರಚಿದರು—ಅವನು ಆ ಜಾಗ ಬಿಟ್ಟು ಬೇರೆ ಜಾಗಕ್ಕೆ ಹೋಗಬೇಕಾಯಿತು. ಒಂದೆಡೆ ಅವನಿಗೆ ಸಫಲತೆ ಸಿಕ್ಕದಿದ್ದರೂ ಇನ್ನೊಂದೆಡೆ ಹೋಗಿ ಪ್ರಯತ್ನ ಮಾಡಿದನು. ಈ ಪ್ರಯತ್ನವೇ ಅಗ್ನಿದೇವನ ಉಪಾಸನೆಯ ನಿಜವಾದ ಸ್ವರೂಪ. ಮುಂದೆ ಮುಂದೆ ನಡೆಯುವುದೇ ಮುಂದು ವರಿಯುವುದರ ಮೂಲ ಸಿದ್ಧಾಂತ. ನಿರಂತರ ಕಾರ್ಯನಿಮಗ್ನನಾಗಿರುವವನ ಕೈಯಲ್ಲೇ

ಸಫಲತೆ ಸಿಕ್ಕುತ್ತದೆ. ನಿರಂತರ ಎಂಟು ವರ್ಷಗಳ ಅವಿರತ ಪ್ರಯತ್ನದಿಂದಾಗಿ ಅವನು 'ಕುದುರೆಯಿಲ್ಲದ ಗಾಡಿ' ಮಾಡುವುದರಲ್ಲಿ ಸಫಲನಾದನು. ಇಂದು ಆತನ ಮೋಟಾರುಕಾರುಗಳು ಜಗತ್ತಿನ ಎಲ್ಲೆಡೆಗಳಲ್ಲಿಯೂ ವ್ಯಾಪಿಸಿವೆ. ಅತ್ಯಂತ ದರಿದ್ರನಾಗಿ, ಮೂರ್ಖನೆನಿಸಿಕೊಂಡು ಸೋಲುಗಳೊಂದಿಗೆ ತನ್ನ ಜೀವನ ಪ್ರಾರಂಭಿಸಿದ ಹೆನ್ರಿಫೋರ್ಡ್ ಕೊನೆಯಲ್ಲಿ ಜಗತ್ತಿನಲ್ಲೇ ಅತ್ಯಂತ ಶ್ರೀಮಂತ, ಪ್ರಖರ ಪ್ರತಿಭೆಯ ವೈಜ್ಞಾನಿಕ ಹಾಗೂ ಯಶಸ್ವೀ ವ್ಯಕ್ತಿಯಾದನು.

ದೈವೀಸ್ರೋತದಿಂದ ಬೇರೆಯಾಗುವ ವಿಚಾರವೇ ನಮ್ಮಲ್ಲಿನ ಎಲ್ಲಾ ರಚನಾತ್ಮಕ ಶಕ್ತಿಗಳ ಕುಠಾರಾಘಾತವಾಗುತ್ತದೆ. ಮುಂದುವರಿಯುವ ಶಕ್ತಿಯನ್ನೇ ನಾಶಮಾಡುತ್ತದೆ. ನಮ್ಮ ಎಲ್ಲಾ ದುರ್ಬಲತೆಗಳ, ಕಾಯಿಲೆಗಳ, ದುಃಖ-ಕಷ್ಟಗಳ ಕಾರಣವೆಂದರೆ, ಎಲ್ಲಾ ಸುಖ-ಶಾಂತಿ, ಶಕ್ತಿಗಳ ಮೂಲ ಸ್ರೋತಸ್ಸಾದ ಪರಮಾತ್ಮನನ್ನು, ಆತನ ವಾಸ್ತವಿಕ ಸ್ವರೂಪವನ್ನು ಮರೆತಿದ್ದೇವೆ. ಪರಮಾತ್ಮನ ಸಹವಾಸದಿಂದ ದೂರವಾದ ಮನುಷ್ಯನು ಸೈತಾನನಾಗಿ ಬಿಡುತ್ತಾನೆ. ಆಗ ಅವನ ಕಾಲುಗಳು ಅವನತಿಯ ಕಡೆಗೂ, ವಿಚಾರಗಳು ಪತನದ ಕಡೆಗೂ ಸಾಗುತ್ತವೆ. ನಿಜವೆಂದರೆ ಈಶ್ವರನ ಪ್ರಕಾಶದಲ್ಲಿ ಹೆಜ್ಜೆಯಿಡುತ್ತಲೇ ಎಲ್ಲಾ ದುರ್ಬಲತೆಗಳೂ, ಪಾಪಗಳೂ, ಸೂರ್ಯನ ಎದುರಿನ ಅಂಧಕಾರದಂತೆ ನಷ್ಟವಾಗುತ್ತವೆ.

ಸ್ವಾಮೀ ರಾಮತೀರ್ಥರು ಓರ್ವ ಬಾದಶಹನ ಕಥೆ ಬರೆದಿದ್ದಾರೆ. ಆ ಬಾದಶಹನು ತನ್ನ ಕೋಣೆಯಲ್ಲಿ ಒಂದು ಮೃಗದ ಕೊಂಬು ನೆಟ್ಟಿದ್ದನು. ಅದರ ಟೊಳ್ಳಾದ ಭಾಗದಲ್ಲಿ ನೀರನ್ನು ತುಂಬಿಸಲಾಗಿತ್ತು. ಆ ಕೊಂಬಿನಲ್ಲಿರುವ ನೀರನ್ನೆಲ್ಲಾ ಪೂರ್ತಿ ಕುಡಿಯುವವರಿಗೆ ತನ್ನ ಅರ್ಧ ರಾಜ್ಯಕೊಡುವುದಾಗಿ ಘೋಷಿಸಿದ್ದನು. ಬಹು ಸುಲಭವಾದ ಕೆಲಸವಿದೆಂದು ಭಾವಿಸಿ ಅನೇಕರು ಧಾವಿಸಿಬಂದರು. ಆದರೆ ಯಾರೂ ಅದರಲ್ಲಿ ಸಫಲರಾಗಲಿಲ್ಲ. ಏಕೆ ಗೊತ್ತೇ? ಕೊಂಬಿನ ಮೇಲ್ಭಾಗ ಚಿಕ್ಕದಾಗಿ ಕಾಣುತ್ತಿದರೂ ಅದನ್ನು ಸಾಗರದೊಂದಿಗೆ ಸಂಬಂಧ ಕಲ್ಪಿಸುವಂತೆ ಮಾಡಲಾಗಿತ್ತು. ಈ ದೃಷ್ಟಾಂತದಂತೆಯೇ, ದೇಹಧಾರಿಯಾದ ಜೀವಾತ್ಮನು ಅಲ್ಪಜ್ಞನೂ, ಅಲ್ಪಶಕ್ತನೂ ಆಗಿದ್ದರೂ, ಅವನ ಸಂಬಂಧ ಸಾಗರರೂಪೀ ಪರಮಾತ್ಮನೊಂದಿಗೆ ಉಂಟಾದಾಗ, ಆಗ ಅವನ ಶಕ್ತಿ ಅಪಾರವೂ, ಅನಂತವೂ ಉಂಟಾಗುತ್ತದೆ. ಸ್ವಾಮೀ ರಾಮತೀರ್ಥರು ಮತ್ತೊಂದು ದೃಷ್ಟಾಂತ ಹೇಳುತ್ತಿದ್ದರು. ಫ್ರಾನ್ಸ್ ಮತ್ತು ಜರ್ಮನಿಯ ಯುದ್ಧದಲ್ಲಿ ಫ್ರೆಡರಿಕ್ ಚಕ್ರವರ್ತಿ ಸೋತುಹೋಗುವ ಸ್ಥಿತಿ ಬಂತು. ಶತ್ರುಗಳು ಕೋಟೆಯೊಳಗೆ ನುಗ್ಗಿಬಂದರು. ಆದರೂ ಫ್ರೆಡರಿಕ್‌ನಿಗೆ ಭಗವಂತನಲ್ಲಿ ನಿಶ್ಚಲ ನಂಬಿಕೆ. ಅವನು ಧೈರ್ಯಗೆಡಲಿಲ್ಲ. ಅವನು ತನ್ನ ಸೈನಿಕರನ್ನು ಒಟ್ಟುಗೂಡಿಸಿದನು. ಕೆಲವರನ್ನು ಒಂದು ಗುಡ್ಡದ ಮೇಲೂ ಮತ್ತೆ ಕೆಲವರನ್ನು ಇನ್ನೊಂದು ಗುಡ್ಡದ ಮೇಲೂ ನಿಲ್ಲಿಸಿದನು. ಶತ್ರು ಸೈನಿಕರತ್ತ ಸಾಗಿ ಹೇಳಿದನು—"ನಿಮ್ಮ ಶಸ್ತ್ರಾಸ್ತ್ರಗಳು ಕೆಳಗಿಡಿ". ಏಕೆಂದು ಕೇಳಿದ್ದಾಗ, "ನನ್ನ ಸೈನಿಕರು ನಾಲ್ಕೂ ಕಡೆಯಿಂದ ನಿಮ್ಮನ್ನು ಆಕ್ರಮಿಸಿದ್ದಾರೆ, ಕಾಣುವುದಿಲ್ಲವೇ?-ಎಂದು ಗರ್ಜಿಸಿದನು. ಶತ್ರುಗಳು ಶಸ್ತ್ರಗಳನ್ನು ಕೆಳಗೆ ಬಿಸುಟರು; ಶರಣಾಗತರಾದರು.

ಸ್ಕಾಟ್‌ಲೆಂಡ್‌ನ ಬಾಲಕನೋರ್ವ ಅಲ್ಲಿಂದ ಓಡಿಹೋಗಿ ಲಂಡನ್ ತಲುಪಿದನು. ಅಲ್ಲಿಯ ಮೇಯರ್‌ನ ಮನೆಯ ತೋಟದಲ್ಲಿ ಆಡತೊಡಗಿದನು. ಅಲ್ಲಿಗೆ ಸ್ವಲ್ಪ ಸಮಯ

ದಲ್ಲೇ ಒಂದು ಬೆಕ್ಕು ಬಂತು. ಅದೇ ಸಮಯದಲ್ಲಿ ಗಂಟೆ ಬಾರಿಸತೊಡಗಿತು. ಆ ಬಾಲಕ ಬೆಕ್ಕಿನೊಂದಿಗೆ ಮಾತನಾಡುತ್ತಾ ಹೇಳತೊಡಗಿದನು.

What does the mad bell say, Ton,! Ton!, Ton!
Wheetington wheetington, lord Mayor of London.

ಅರ್ಥಾತ್, ಬುದ್ಧಿಹೀನ ಗಂಟೆ ಇದು ಏನು ಹೇಳುತ್ತಿದೆ. ಟನ್, ಟನ್, ಟನ್! ವ್ಹಿಟಿಂಗ್ ಟನ್ ಲಂಡನಿನ ಮೇಯರ್. ಈ ರೀತಿ ಹೇಳುತ್ತಿದ್ದಂತೆಯೇ ಲಂಡನಿನ ಮೇಯರನೇ ಅಲ್ಲಿಗೆ ಆಗಮಿಸಿದನು. ಅವನಿಗೆ ಈ ಬಾಲಕನ ಮಾತುಗಳು ಮೆಚ್ಚಿಗೆಯಾದವು. ಅವನನ್ನು ತನ್ನಲ್ಲಿಯೇ ಇರಿಸಿಕೊಂಡು ಬೆಳೆಸಿದನು. ಮುಂದೊಂದು ದಿನ ಆ ಹುಡುಗನು ಲಂಡನ್‌ನ ಲಾರ್ಡ್‌ಮೇಯರನಾದನು.

ಆದರೆ ನಮ್ಮಲ್ಲಿ ಈ ಭಾವನೆ ರಕ್ತಗತವಾಗಿದೆ:
ಮೈ ಗುಲಾಮ ಮೈಗುಲಾಮ! ಮೈಗುಲಾಮ ತೇರಾ!
ತೂ ದೀವಾನ, ತೂ ದೀವಾನ, ತೂ ದೀವಾನ ಮೇರಾ ॥

ಇದರಿಂದ ನಾವು ಅಕರ್ಮಣ್ಯರಾದೆವು. ಜೀವನದಲ್ಲಿ ಸಫಲತೆ ಬೇಕೆಂದಾದರೆ ಎಂದಿಗೂ ಗಾಬರಿಗೊಳ್ಳಬೇಡ. ಸರ್ವಶಕ್ತನಾದ ಪರಮಾತ್ಮನಲ್ಲಿ ನಂಬಿಕೆ ಇಟ್ಟು 'ನಡೆ ಮುಂದೆ, ನಡೆ ಮುಂದೆ, ನುಗ್ಗಿ ನಡೆ ಮುಂದೆ' ಎಂಬ ಮಂತ್ರ ಜಪಿಸುತ್ತಾ ಮುಂದುವರಿ. ಹೇ ಪರಮಯಜ್ಞದ ಯಾಜ್ಞಿಕ! ಹೇ ಅನಂತ ಯಾತ್ರೆಯ ಪಥಿಕ! ಹೇ ದಿವ್ಯಯಜ್ಞದ ಯೋಧನೇ! ನಿನ್ನ ಮಂತ್ರವಿಂದು ಇದೇ ಆಗಬೇಕು. ನಿನ್ನ ಅಂತರಾತ್ಮನ ಕರೆಯಾದರೂ ಇದೇ ಆಗಿದೆ. ಅಗ್ನಿರೂಪೀ ಪ್ರಭುವಿನ ಆದೇಶವೂ ಇದೇ ಆಗಿದೆ. ಐತರೇಯ ಬ್ರಾಹ್ಮಣದ 'ಚರೈವೇತಿ, ಚರೈವೇತಿ'ಯ ಸಾರ್ಥಕತೆಯೂ ಪ್ರಭುವಿನಲ್ಲಿ ಶ್ರದ್ಧೆ ಹಾಗೂ ವಿಶ್ವಾಸವಿಲ್ಲದೆ ಸಾಧ್ಯವಿಲ್ಲ. ನಮ್ಮ ಪರಮ ಲಕ್ಷ್ಯವೂ ಆ ಪ್ರಭುವೇ ಆಗಿದ್ದಾನೆ. ಆ ಪರಮ ಲಕ್ಷ್ಯವು ಪೂರ್ತಿಯಾಗಲು ಆ ಪರಮ ಪಿತನಲ್ಲಿ ಅವಿಚಲ ವಿಶ್ವಾಸವೂ, ದೃಢವಾದ ಶ್ರದ್ಧೆಯು ಅಡಿಗಲ್ಲೂ ಬೇಕೇಬೇಕು. ಆದುದರಿಂದ ಹೇ ಪ್ರಭೋ! ನೀನು ನನ್ನ ಪ್ರಯತ್ನಗಳಲ್ಲಿ ಸಫಲತೆಯ ನಂಬಿಕೆ ಮೂಡುವಂತೆ ಅನುಗ್ರಹಿಸು. ನಾವು ಯಾವ ಅಂಧಕಾರದ ಸುರಂಗ ಮಾರ್ಗದಲ್ಲಿ ನುಸುಳುತ್ತಿದ್ದೇವೋ ಅದು ಕೊನೆಯಾಗುವುದು ನಿಶ್ಚಿತ; ಹಾಗೆಯೇ ಬೆಳಕಿನ ಆವರಣವನ್ನು ನಾವು ಪ್ರವೇಶಿಸುವುದೂ ಅಷ್ಟೇ ನಿಶ್ಚಿತ. ನಾವು ಯಾವ ಸಂಘರ್ಷದಲ್ಲಿ ನಿರತರಾಗಿದ್ದೇವೆಯೋ ಅದರಲ್ಲಿ ವಿಜಯಿಗಳಾಗುವುದು ಖಂಡಿತ--ಎಂಬ ದೃಢವಿಶ್ವಾಸ ನಮ್ಮಲ್ಲಿ ಮೂಡಲಿ.



Veda Prakash R. No. 27437/75 Regd. No. KRNR 13/75-76